CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೨೮, ೨೦೦೫ (ವೈಶಾಖ ೮, ಶಕ ವರ್ಷ ೧೯೨೭) | ಸಂಚಿಕೆ ೧೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ಜಿಲ್ಲಾ ನೋಂದಣಾಧಿಕಾರಿಗಳು ಹಾವೇರಿ ಇವರ ನಡುವಳಿಕೆಗಳು

**ವಿಷಯ:** ಹಾವೇರಿ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ/ಶ್ರೀಮತಿ ರೇಖಾ ಬಿ ಮುದ್ದಿ w/o:- ಜಯಧರ ಎಂ ದೊಡ್ಡಮನಿ, C/o M.N. ದೊಡ್ಡಮನಿ ಸ್ಪೇಷಲ್ ಡಿ.ಸಿ. ಎಚ್. ನಂ. 5, ಮಾಲತೇಶ ನಿವಾಸ, ಕೆಂಪಗೆರೆ ಲೈನ್ ಬಜಾರ್, ಧಾರವಾಡ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇರರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02 ದಿನಾಂಕ:14.12.2004.
3. ಈ ಕಚೇರಿಯ ನೇಮಕಾತಿ ಆದೇಶ ಸಂಖ್ಯೆ: ಜಿನೋಹಾ/ಸಿಬ್ಬಂದಿ 63/04-05 ದಿನಾಂಕ:3.1.2005.

**ಪ್ರಸ್ತಾವನೆ:**

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (2) ಅವರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇಲೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಚೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಚೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಚೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಚೇರಿ | ವರ್ಗೀಕರಣ |
|---|---|---|---|---|
| 1. | ರೇಖಾ ಬಿ ಮುದ್ದಿ w/o:- ಜಯಧರ ಎಂ ದೊಡ್ಡಮನಿ C/o M.N. ದೊಡ್ಡಮನಿ ಸ್ಪೇಷಲ್ ಡಿ.ಸಿ.ಎಚ್. ನಂ.5, ಮಾಲತೇಶ ನಿವಾಸ, ಕೆಂಪಗೆರೆ ಲೈನ್ ಬಜಾರ್, ಧಾರವಾಡ. | ST | ಜಿಲ್ಲಾ ನೋಂದಣಿ ಕಚೇರಿ ಹಾವೇರಿ ಜಿಲ್ಲೆ, ಹಾವೇರಿ. | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ಈ ಕಚೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ:7.1.05 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಚೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ:21.1.05 ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಚೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ

ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅವಧಿಯ ಯಾವುದೇ ರೀತಿಯ ಕೋರಿಕೆಯನ್ನು ಈ ಕಚೇರಿಗೆ ಸಲ್ಲಿಸಿರುವುದಿಲ್ಲ ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಜಿನೋಹಾ/ಸಿಬ್ಬಂದಿ/63/2004-05, ದಿನಾಂಕ: 31ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ(1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್ (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18(3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ/ಶ್ರೀಮತಿ ರೇಖಾ ಬಿ ಮುದ್ದಿ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ಹುದ್ದೆಯ ನೇಮಕ ಮಾಡಿದ ಈ ಕಚೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ಪಿ.ಆರ್. 579 ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು ಹಾವೇರಿ ಜಿಲ್ಲೆ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀ ಎನ್.ಎಸ್. ಮಹೇಂದ್ರ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 352ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:352:2004-05:5162 ದಿ:22.12.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಡಿಸಿಬಿ:ಕಗಗು:352:2004-05:11392 ದಿನಾಂಕ: 3.1.2005.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ. 63ರಲ್ಲಿ ಶ್ರೀ ಎನ್.ಎಸ್. ಮಹೇಂದ್ರ ರವರಿಗೆ 2-03 ಎಕರೆಗೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ 352 ಇದ್ದು, ಸದರಿ ಗುತ್ತಿಗೆಯು ದಿನಾಂಕ:21.7.2000 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 2ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.63,673/- ಗಳನ್ನು ಪಾವತಿಸಿ ಗಣಿ ಕಾರ್ಯ ಪ್ರಾರಂಭಗೊಳಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸ ಬೇಕಾಗಿರುತ್ತದೆ. ಆದುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂ:ಗಭೂಇ:ಡಿ.ಸಿ.ಬಿ:ಕಗಗು:352:2004-05/255 ದಿನಾಂಕ: 5ನೇ ಏಪ್ರಿಲ್ 2005**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಸಾಲಬನ್ನಿ ಗ್ರಾಮದ ಸರ್ವೆ ನಂ.63ರಲ್ಲಿ 2-03 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:352ನ್ನು ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 580 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಿಡಗಲ್ಲು ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ. ಸಿಂಧೂರ್ ಎಕ್ಸ್‌ಪೋರ್ಟರ್ಸ್‌ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 530ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:530:04-05:5031 ದಿ:15.12.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಡಿಸಿಬಿ:ಕಗಗು:530:2004-05:6735 ದಿನಾಂಕ: 9.8.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಿಡಗಲ್ಲು ಗ್ರಾಮದ ಸರ್ವೆ ನಂ. 42ರಲ್ಲಿ ಮೆ. ಸಿಂಧೂರ್ ಎಕ್ಸ್‌ಪೋರ್ಟರ್ಸ್ ರವರಿಗೆ 0-20 ಎಕರೆಗೆ ದಿನಾಂಕ:19.7.2002 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 530ರಲ್ಲಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.14,768/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು

ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸ ಬೇಕಾಗಿರುತ್ತದೆ. ಆದುದರಿಂದ ಈ ಆದೇಶ ನೀಡಲಾಗಿದೆ.

**ಆದೇಶ ಸಂ:ಗಭೂಇ:ಡಿ.ಸಿ.ಬಿ:ಕಗಗು:530:2004-05/264 ದಿನಾಂಕ: 5ನೇ ಏಪ್ರಿಲ್ 2005**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ನಿಡಗಲ್ಲು ಗ್ರಾಮದ ಸರ್ವೆ ನಂ.42ರಲ್ಲಿ 0-20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:530ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಕಲ್ಲು ಗಣಿ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 581 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹಣಕಡಬೂರು ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಶ್ರೀಮತಿ ಅನಿತ ವಿ.ಎನ್. ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 319ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:319:2004-05:4316 ದಿ:10.12.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಕಗಗು:319:2004-05:10848 ದಿನಾಂಕ: 20.12.2004.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹಣಕಡಬೂರು ಗ್ರಾಮದ ಸರ್ವೆ ನಂ. 60ರಲ್ಲಿ ಶ್ರೀಮತಿ ಅನಿತ ವಿ.ಎನ್. ರವರಿಗೆ 2-20 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 319 ಇದ್ದು ಸದರಿ ಗುತ್ತಿಗೆಯು ದಿನಾಂಕ:12.5.2000 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 2ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.51,187/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆದಾರರು ಬಾಕಿ ಪಾವತಿಸದೆ ನಿಷ್ಕ್ರಿಯವಾಗಿರುವುದಾಗಿ ತಿಳಿಸಿ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಬೇಕಾಗಿರುತ್ತದೆ. ಆದುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂ:ಗಭೂಇ:ಡಿ.ಸಿ.ಬಿ:ಕಗಗು:319:2004-05/34 ದಿನಾಂಕ: 1ನೇ ಏಪ್ರಿಲ್ 2005**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಹಣಕಡಬೂರು ಗ್ರಾಮದ ಸರ್ವೆ ನಂ.60ರಲ್ಲಿ 2.20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:319ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 582 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆಸದೆ ಇರುವ ಕಾರಣ ಕಲಂ 28ಎ(5) ಮತ್ತು 28ಬಿ(2) ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ: ಸನಿ47/ ಚುನಾವಣೆ/39/2004-05 ದಿ:27.01.2005.
2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 31.3.2005.
3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯು/37/ಸಿಎಲ್‌ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಕಛೇರಿಯ ಆದೇಶದಲ್ಲಿ ಮಜರೆ ಗಂಗಸಂದ್ರ ಎಸ್ಸಿ/ಎಸ್ಟಿ ರೇಷ್ಮೆ ಬೆಳೆಗಾರರ ಕೊಳವೇ ಬಾವಿ ಸಹಕಾರ ಸಂಘ (ನಿ), ಹೊಸಕೋಟೆ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ: 31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಆದರೆ ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು ಸಂಘದ ಆಡಳಿತ ಮಂಡಳಿಯವರು ನಿಗದಿತ ಅವಧಿಯಲ್ಲಿ ಚುನಾವಣೆ ನಡೆಸಲು ವಿಫಲರಾಗಿರುವುದಾಗಿ ತಿಳಿಸುತ್ತಾ ಕಾನೂನಿನ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 28ಬಿ(2) ರನ್ವಯ ದಿನಾಂಕ:31.3.2005 ರೊಳಗೆ ಆಡಳಿತ ಮಂಡಳಿ ಚುನಾವಣೆ ನಡೆಸಲು ವಿಫಲರಾಗಿರುವ ಆಡಳಿತ ಮಂಡಳಿ ಸದಸ್ಯರು ಪ್ರಸ್ತಾಪಿತ ಸಂಘದಲ್ಲಿ ಐದು ವರ್ಷಗಳ ಅವಧಿಯವರೆಗೆ ಚುನಾವಣೆಗೆ ಸ್ಪರ್ಧಿಸಲು ಅನರ್ಹರಾಗಿರುತ್ತಾರೆ ಹಾಗೂ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದ ದೈನದಿಂದ ವ್ಯವಹಾರ ನಡೆಸಲು ಕಲಂ 28ಎ(5) ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಕ್ರಮಾಂಕ:ಸನಿ47/ಆಮರ/09/2005-06, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚನ್ನಬೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 28ಎ(5)ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮಜರೆ ಗಂಗಸಂದ್ರ ಎಸಿ/ಎಸ್ಟಿ ರೇಷ್ಮೆ ಬೆಳೆಗಾರರ ಕೊಳವೆ ಬಾವಿ ಸಹಕಾರ ಸಂಘ (ನಿ), ಹೊಸಕೋಟೆ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ, ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸಕೋಟೆ ತಾಲ್ಲೂಕು ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಆಡಳಿತಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ಆಡಳಿತಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ಆಡಳಿತಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ಆಡಳಿತಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

**ಎಂ. ಚನ್ನಬೈರಯ್ಯ**

ಪಿ.ಆರ್. 584 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

**HIGH COURT OF KARNATAKA, BANGALORE**

**Notification No: HCBB 71/2005, Dated: 12th April 2005**

**SUMMER VACATION OF 2005**

The High Court will remain closed for Summer Vacation from Monday the 18th April 2005 to Sunday the 22nd May 2005 (Both days inclusive).

No appeals, Petitions or Applications of Civil nature will be received during the Vacation except in cases where it is sought to obtain urgent Interim Orders like Temporary Injunction, Attachment and / or stay of Proceedings.

Criminal Appeals, Criminal Revision Petitions and urgent applications in Criminal matters will be received during during the Summer Vacation.

During the Summer Vacation, the Office of the High Court will remain open from 10.15 AM to 2.00 PM from, Monday the 18th April 2005 to Friday the 20th May 2005 (Both days inclusive). Saturdays will not be working days during the Summer Vacation. Papers will be received from 10.30 AM to 12.30 PM on the days on which the Office will be open. On the Vacation sitting days, the working hours of the Office shall be from 10.15 AM to 5.00 PM.

Vacation Benches mentioned hereunder will sit in Court Halls mentioned against them on the "SITTING DAYS" noted below at 10.30 AM during the Vacation to hear urgent matters. All matters of the nature referred to above filed during vacation and inclusive of the day previous to the sitting day will be posted before the Court. But those filed on the sitting day will not be posted on that day, except by Special Orders of the Vacation Bench or the Vacation Judge, as the case may be.

| VACATION BENCH DIVISION BENCH | COURT HALL | VACATION JUDGES SINGLE BENCH | COURT HALL |
|---|---|---|---|
| **18.4.05 to 1.5.05<br>Sitting days<br>19.4.05, 21.4.05, 26.4.05 & 28.4.05** | | | |
| Hon'ble Mr. Justice K.L. Manjunath | 9 | Hon'ble Mr. Justice K.L. Manjunath | 9 |
| AND | | Hon'ble Mr. Justice S. Abdul Nazeer | 10 |
| Hon'ble Mr. Justice V. Jagannathan | | Hon'ble Mr. Justice V. Jagannathan | 11 |
| **VACATION BENCH DIVISION BENCH** | **COURT HALL** | **VACATION JUDGES SINGLE BENCH** | **COURT HALL** |
| **2.5.05 to 15.5.05<br>Sitting days<br>3.5.05, 5.5.05, 10.5.05 & 12.5.05** | | | |
| Hon'ble Mr. Justice H.L. Dattu | 9 | Hon'ble Mr. Justice H.L. Dattu | 9 |
| AND | | Hon'ble Mr. Justice R. Gururajan | 10 |
| Hon'ble Mr. Justice A.C. Kabbin | | Hon'ble Mr. Justice A.C. Kabbin | 11 |

| VACATION BENCH DIVISION BENCH | COURT HALL | VACATION JUDGES SINGLE BENCH | COURT HALL |
|---|---|---|---|
| **16.5.05 to 22.5.05 Sitting days 17.5.05 & 19.5.05** | | | |
| Hon'ble Mr. Justice A.M. Farooq | 9 | Hon'ble Mr. Justice A.M. Farooq | 9 |
| AND | | Hon'ble Mr. Justice N. Kumar | 10 |
| Hon'ble Mr. Justice B.S. Patil | | Hon'ble Mr. Justice B.S. Patil | 11 |

**SITTING DAYS:-**

The sittings will be on Tuesday the 19th, Thursday the 21st Tuesday the 26th, Thursday the 28th April 2005 Tuesday the 3rd Thursday the 5th Tuesday the 10th, Thursday the 12th Tuesday the 17th and Thursday the 19th May 2005 and on such other day as may be fixed by the Vacation Bench / Vacation Judge.

On the days of sitting, after completion of the Division Bench sitting, the Vacation Judges will sit single and take up single Bench matters.

The cases filed during Summer Vacation on the dates previous to the date of vacation Court will be posted before the vacation Court, if they are in order.

No Memos for posting will be entertained by the Deputy Registrar during the Summer Vacation.

Motions for taking up the case for Orders/Admission/Preliminary Hearing shall be made before the respective Courts.

By Order of Hon'ble the Chief Justice,

P.R. 585

**R.B. BUDIHAL**
Registrar (Judicial)

**ಕರ್ನಾಟಕ ಸರ್ಕಾರ**

**ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ**

**ವಿಶ್ವೇಶ್ವರಯ್ಯ ಕೇಂದ್ರ, ಮುಖ್ಯ ಗೋಪುರ, 20ನೇ ಮಹಡಿ, ಡಾ: ಅಂಬೇಡ್ಕರ್ ವಿಧಿ, ಬೆಂಗಳೂರು**

**ಅಧಿಸೂಚನೆ ಸಂಖ್ಯೆ: ಶೀಬೆಪ್ರಾ 09 ಇತರೆ 05, ದಿನಾಂಕ:**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ ಪ್ರಕರಣ 2ರನ್ವಯ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ ಅಧಿಸೂಚನೆ ಸಂಖ್ಯೆ:ಶೀಬೆಪ್ರಾ 122 ಇತರೆ 2001, ದಿನಾಂಕ:29.8.03ನ್ನು ಮಾರ್ಪಡಿಸಿ ಈ ಕೆಳಕಂಡಂತೆ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರರ ಹಾಗೂ ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ 20ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಮುಖ್ಯ ಗೋಪುರ, ಅಂಬೇಡ್ಕರ್ ವೀಧಿ, ಬೆಂಗಳೂರು-560 001. | ಸಾರ್ವಜನಿಕ ಪ್ರಾಧಿಕಾರ |
| 2. | ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ | ಶಾಖೆ |
| 3. | ಆಡಳಿತಾಧಿಕಾರಿಗಳು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ | ಸಕ್ಷಮ ಪ್ರಾಧಿಕಾರ |
| 4. | ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ) ಮತ್ತು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ | ಅಪೀಲು ಪ್ರಾಧಿಕಾರ |

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 586

**ಕೆ. ನಾರಾಯಣ**
ಆಡಳಿತಾಧಿಕಾರಿ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ.

**ಉಡುಪಿ ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ ಇವರ ಅಧಿಸೂಚನೆ**

**ನಂ.ಎಂ.ಎಜಿ:ಸಿಆರ್:183:2004-05, ದಿನಾಂಕ: 1ನೇ ಏಪ್ರಿಲ್ 2005**

ಉಡುಪಿ ತಾಲ್ಲೂಕು, ಆದಿ ಉಡುಪಿ (ಮೂಡಬೆಟ್ಟು)ಯಲ್ಲಿ ದಿನಾಂಕ:13.3.2005 ರಂದು ಗೋಸಾಗಣೆ ವಿಷಯದಲ್ಲಿ ಮತ್ತು ಆ ಸಂಬಂಧವಾಗಿ ನಡೆದ ಹಲ್ಲೆ ಮತ್ತು ಬೆತ್ತಲೆ ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಹಿಂದೂ ಹಿತರಕ್ಷಣಾ ವೇದಿಕೆ ಉಡುಪಿ ಇವರು ದಿನಾಂಕ: 26.3.2005 ರಂದು ಮೆರವಣಿಗೆ ಮತ್ತು ಸಭೆಯನ್ನು ನಡೆಸಿದ್ದು ಈ ಸಂದರ್ಭದಲ್ಲಿ ಸಣ್ಣ ಪ್ರಮಾಣದಲ್ಲಿ ಕಲ್ಲು ತೂರಾಟದ ಘಟನೆಗಳು ನಡೆದಿರುತ್ತದೆ. ಈ ಹಿನ್ನೆಲೆಯಲ್ಲಿ ಉಡುಪಿ ತಾಲ್ಲೂಕಿನಲ್ಲಿ ಶಾಂತಿ ಸುವ್ಯವಸ್ಥೆ ಪಾಲನೆ ಹಿತದೃಷ್ಟಿಯಿಂದ ಪ್ರಚಲಿತ ವಿದ್ಯಮಾನವನ್ನು ಸೂಕ್ಷ್ಮವಾಗಿ ಗಮನಿಸಿ, ಮುಂಜಾಗ್ರತಾ ಕ್ರಮವಾಗಿ ಕಾನೂನು, ಸಾರ್ವಜನಿಕ ಶಿಸ್ತು ಹಾಗೂ ಶಾಂತಿ ಪಾಲನೆಯ ಹಿತದೃಷ್ಟಿಯಿಂದ ಈ ಕಚೇರಿಯ ದಿನಾಂಕ:29.3.2005ರ ಅಧಿಸೂಚನೆಯಂತೆ ದಿನಾಂಕ:29.3.2005ರ ಸಾಯಂಕಾಲ 6.00 ಗಂಟೆಯಿಂದ ದಿನಾಂಕ:1.4.2005ರ ಸಾಯಂಕಾಲ 6.00 ಗಂಟೆಯವರೆಗೆ 1973ರ

ಕ್ರಿಮಿನಲ್ ಪ್ರೋಸೀಜರ್ ಕೋಡ್‌ನ ಸೆಕ್ಷನ್ 144ರಂತೆ ನಿಷೇದಾಜ್ಞೆಯನ್ನು ಜಾರಿಗೊಳಿಸಲಾಗಿತ್ತು. ಈ ಘಟನೆಗೆ ಸಂಬಂಧಪಟ್ಟಂತೆ 25 ಮೊಕದ್ದಮೆಗಳು ದಾಖಲಾಗಿದ್ದು ಇದರಿಂದಾಗಿ ಮತೀಯ ಗಲಭೆಗೆ ಎಡೆಮಾಡಿಕೊಡುವ ಸಾಧ್ಯತೆ ಇದ್ದು ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ನಿಷೇದಾಜ್ಞೆಯನ್ನು ವಿಸ್ತರಿಸುವಂತೆ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಕೋರಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆ. ಮುರಳೀಧರ, ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು, ಉಡುಪಿ +ಜಿಲ್ಲೆ ಆದ ನಾನು ಉಡುಪಿ ತಾಲ್ಲೂಕಿನ ಕಾನೂನು, ಸಾರ್ವಜನಿಕ ಶಿಸ್ತು ಹಾಗೂ ಶಾಂತಿಪಾಲನೆಯ ದೃಷ್ಟಿಯಿಂದ 1973ರ ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 144ರ ನಿಷೇಧಾಜ್ಞೆಯನ್ನು ದಿನಾಂಕ:1.4.2005 ರ ಸಂಜೆ 6.00 ಗಂಟೆಯಿಂದ ದಿನಾಂಕ: 4.4.2005ರ ಸಾಯಂಕಾಲ 6.00 ಗಂಟೆಯವರೆಗೆ ಮುಂದುವರಿಸಿ ಈ ಮೂಲಕ ಘೋಷಿಸಿರುತ್ತೇನೆ.

1. ಯಾವುದೇ ಸಾರ್ವಜನಿಕರು 5 ಜನರು ಯಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕ ರಸ್ತೆ, ಬೀದಿ, ಓಣಿ, ಕೇರಿಗಳಲ್ಲಿ ಯಾ ಸಾರ್ವಜನಿಕ ಸ್ಥಳ ಮತ್ತು ಸರಕಾರಿ ಕಟ್ಟಡ ಮತ್ತು ಸರಕಾರಿ ಕಛೇರಿಯ 100 ಗಜಗಳ ಅಂತರದಲ್ಲಿ ಗುಂಪು ಸೇರುವುದು ಯಾ ತಿರುಗುವುದನ್ನು ನಿಷೇಧಿಸಿದೆ.

2. ಯಾವುದೇ ಆಯುಧ, ಕುಡುಗೋಲು, ಖಡ್ಗ, ಭರ್ಜಿ, ಗಧೆ, ಕೋಲು, ಚೂರಿ, ದೊಣ್ಣೆ, ಲಾಠಿ ಅಥವಾ ದೈಹಿಕ ಹಿಂಸೆಗೆ ಕಾರಣವಾಗುವ ಅಥರಾ ಮಾರಕವಾಗುವ ಇನ್ನಾವುದೇ ವಸ್ತುಗಳನ್ನು ಧರಿಸುವುದನ್ನು ನಿಷೇಧಿಸಿದೆ.

3. ಯಾವುದೇ ಕ್ಷಾರಕ ಯಾ ಸ್ಫೋಟಕ ವಸ್ತುಗಳನ್ನು ಹೊಂದುವುದನ್ನು ನಿಷೇಧಿಸಿದೆ.

4. ಯಾವುದೇ ಕಲ್ಲುಗಳನ್ನು ಒಟ್ಟುಗೂಡಿಸುವುದು, ತಯಾರಿಸುವುದು ಯಾ ಕ್ಷಿಪಣಿಗಳು ಅಥವಾ ಇತರ ಕ್ಷಿಪಣಿಯಾಗಿ ಉಪಯೋಗಿಸಲ್ಪಡುವ ಅವಕಾಶವಿರುವ ಇತರ ಆಯುಧಗಳು ಸಾಧನ ಸಾಮಗ್ರಿಗಳನ್ನು ಧರಿಸುವುದನ್ನು ನಿಷೇಧಿಸಿದೆ.

5. ಮನುಷ್ಯರ ಆಕೃತಿ, ಶರೀರ, ಪ್ರತಿಮೆ, ಬೊಂಬೆ ಪ್ರದರ್ಶನ ನಿಷೇಧಿಸಿದೆ.

6. ಸಾರ್ವಜನಿಕವಾಗಿ ಯಾವುದೇ ಕೂಗನ್ನು ಉಚ್ಚರಿಸುವುದು, ಪದ ಹಾಡುವುದು ಗಾಯನ ಮಾಡುವುದು, ಆವೇಶ ಭಾಷಣ ಮಾಡುವುದು, ಸಂಜ್ಞೆಗಳನ್ನು ಉಪಯೋಗಿಸುವುದು, ಚೇಷ್ಠೆ ಮಾಡುವುದು ಮತ್ತು ಚಿತ್ರಗಳ ಪ್ರದರ್ಶನ ತಯಾರಿಸುವುದು, ಯಾ ಪ್ರಸಾರ ಮಾಡುವುದು, ಗುರುತುಗಳು ಪ್ರಕಟನಾ ಪತ್ರಿಕೆಗಳ ಯಾ ಇತರ ಯಾವುದೇ ವಸ್ತುಗಳ ಪ್ರದರ್ಶನದಿಂದ ಸಭ್ಯತನ, ಸದಾಚಾರ, ಸಾರ್ವಜನಿಕ ಹಿತ ಯಾ ಭದ್ರತೆ ಶಿಥಿಲಗೊಳ್ಳುವಂತಹ ಯಾ ಸರಕಾರವನ್ನು ಕೆದಕುವ ಯಾ ಅಪರಾಧ ವೆಸಗುವ, ಪ್ರೇರೇಪಿಸುವ ಕ್ರಮವನ್ನು ನಿಷೇಧಿಸಿದೆ.

ಈ ಆದೇಶವು ದಿನಾಂಕ:1.4.2005ರ ಸಾಯಂಕಾಲ 6.00 ಗಂಟೆಯಿಂದ ದಿನಾಂಕ: 4.4.2005ರ ಸಂಜೆ 6.00 ಗಂಟೆಯವರೆಗೆ ಜಾರಿಯಲ್ಲಿರುತ್ತದೆ.

ಈ ಆದೇಶವು ಸರಕಾರದಿಂದ ಯಾ ಸರಕಾರದ ಆದೇಶದಂತೆ ನಡೆಸಲ್ಪಡುವ ಯಾವುದೇ ಕಾರ್ಯಕ್ರಮ ಸಭೆ, ಸಮಾರಂಭಗಳಿಗೆ ಅನ್ವಯಿಸುವುದಿಲ್ಲ ಮತ್ತು ಸರಕಾರಿ ನೌಕರರು ಕರ್ತವ್ಯ ನಿರ್ವಹಣೆಯ ವೇಳೆ ಲಾಠಿಗಳನ್ನು ಉಪಯೋಗಿಸುವುದಕ್ಕೆ ಅನ್ವಯಿಸುವುದಿಲ್ಲ.

ಈ ಆದೇಶವು ಕೆಳಗೆ ಸಹಿ ಮಾಡಿದವರ ಪೂರ್ವಾನುಮತಿಯನ್ನು ಪಡೆದು ನಡೆಯುವ ಶವ ಮೆರವಣಿಗೆ, ಮದುವೆ ಮೆರವಣಿಗೆ ಧಾರ್ಮಿಕ ಸಮಾರಂಭ ಮತ್ತು ಶಾಲಾ ಕಾಲೇಜುಗಳಲ್ಲಿ ನಡೆಯುವ ಸಭೆ ಸಮಾರಂಭಗಳಿಗೆ ಅನ್ವಯಿಸುವುದಿಲ್ಲ.

ದಿನಾಂಕ:1.4.2005 ರಂದು ನನ್ನ ಸ್ವ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮುದ್ರೆಯ ಒಪ್ಪಿಗೆಯೊಂದಿಗೆ ಈ ಆದೇಶ ನೀಡಲಾಗಿದೆ.

ಪಿ.ಆರ್. 587 ತಾಲ್ಲೂಕು ದಂಡಾಧಿಕಾರಿ, ಉಡುಪಿ ತಾಲ್ಲೂಕು ಉಡುಪಿ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ ಸಾಗರ**

**ಅಧಿಸೂಚನೆ ಸಂ. ಬಿ3.ಅಮೊ.ವಾಹನ.18/04-05, ದಿನಾಂಕ: 31ನೇ ಮಾರ್ಚ್ 2005**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀರು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | Maruthi Van, CTV-5657 | ವಅಅ, ಚೊರಡಿ<br>ಅ.ಮೊ. ನಂ. 133/2004-05 | ಕಾಣಿಸುತ್ತಿಲ್ಲ | 759491 |
| 2. | Ambassadar Car, GA-01-E-0301 | ವಅಅ, ಶಿಕಾರಿಪುರ<br>ಅ.ಮೊ. ನಂ. 104/2004-05 | 0E407609 | 111-459487 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 588 ಸಾಗರ ವಿಭಾಗ, ಸಾಗರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:24/05 ದಿನಾಂಕ: 23ನೇ ಫೆಬ್ರವರಿ 2005**

**ಅರ್ಜಿದಾರರು**

1. ಚಿಕ್ಕಣ್ಣ S/o ಲೇಟ್ ಗಿರಿಯಪ್ಪಾ, 55 ವರ್ಷ
2. ಹೊಂಬಾಳಮ್ಮ W/o ಚಿಕ್ಕಣ್ಣ, 45 ವರ್ಷ
3. ಮಂಗಳಮ್ಮ d/o ಚಿಕ್ಕಣ್ಣ, 26 ವರ್ಷ
4. ನಾಗರಾಜು S/o ಚಿಕ್ಕಣ್ಣ, 24 ವರ್ಷ

**ಎಲ್ಲರ ವಿಳಾಸ:-** C/o ಮರಿಯಣ್ಣ ಚನ್ನಬಸವೇಶ್ವರ ಟಾಕೀಸ್ ಹತ್ತಿರ ಕುಣಿಗಲ್ ಟೌನ್, ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ನಿಮೇಶ P. ಜೇಠ್‌ಮಲಾನಿ, ಪ್ರಾಪ್ತರು ಮಾಲೀಕರು, ಕಾಮನ್ ರೋಡ್ ಲೈನ್ಸ್ ಫ್ಲೀಟ್ ಜನರ್ಸ್ ಅಂಡ್ ಟ್ರಾನ್ಸ್‌ಪೋರ್ಟ್, ಕನ್ಸ್‌ಕ್ಟರ್ಸ್ No. B-78, ದೇವರಾಜ ಅರಸ್ ಟ್ರಕ್ ಟರ್ಮಿನಲ್, ಕರ್ನಾಟಕ ಸ್ಟುಡಿಯೋ ಎದುರು ಯಶವಂತಪುರ, ಬೆಂಗಳೂರು-22.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಡಿ.ಓ. 10 ನಂ.213, 217, II ಫ್ಲೋರ್, III ಮೇನ್, 4ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಚಿಕ್ಕಣ್ಣ S/o ಲೇಟ್ ಗಿರಿಯಪ್ಪಾ ಇವರು ತಮ್ಮ ಮಗನಾದ ಕೃಷ್ಣಪ್ಪಾ ಇವರು ಪ್ರತಿವಾದಿ 1 ನಿವೇಶ P. ಜೇಠ್ ಮಲಾನಿ ಇವರ ಈಚರ್ ಲಾರಿ ಸಂ. KA-04-A 9857 ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ 2.2.2005 ರಂದು ಉದ್ಯೋಗ ಸಮಯದಲ್ಲಿ ತಿಮ್ಮರಾಜನಹಳ್ಳಿ N.H. 4 ತುಮಕೂರು-ಶಿರಾ ರಸ್ತೆಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

Labour Officer and Commissioner to Workmen's Compensation Tumkur District, Tumkur.

P.R. 591

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಅಕಾ:ಸಿಆರ್:30/05 ದಿನಾಂಕ: 7ನೇ ಮಾರ್ಚ್ 2005**

**ಅರ್ಜಿದಾರರು**

1. ಗಾಯತ್ರಿದೇವಿ W/o ಲಕ್ಷ್ಮೀಕಾಂತರಾಜ ಅರಸ್, 44 ವರ್ಷ
2. ಮೇನಾಕ್ಷಮ್ಮಣ್ಣಿ D/o ಲಕ್ಷ್ಮೀಕಾಂತರಾಜ್ ಅರಸ್, 20 ವರ್ಷ
3. ಇಂದ್ರಮ್ಮಣಿ D/o ಲಕ್ಷ್ಮೀಕಾಂತರಾಜ್ ಅರಸ್, 19 ವರ್ಷ

**ಎಲ್ಲರ ವಿಳಾಸ:** 4ನೇ ಕ್ರಾಸ್, ಶ್ರೀರಾಮನಗರ, ತುಮಕೂರು.

**ವಿರುದ್ಧ**

**ಪ್ರತಿವಾದಿಗಳು**

1. ಪ್ರಿನ್ಸಿಪಾಲ H.F.W.T.C. ಇನ್ಸ್‌ಟಿಟ್ಯೂಶನ್ ಮಾಗಡಿ ರೋಡ್ ಬೆಂಗಳೂರು.
2. ಚೀಫ್ ಸೆಕ್ರೆಟ್ರಿ ಆಫ್ ಕರ್ನಾಟಕ ವಿಧಾನಸೌಧ, ಬೆಂಗಳೂರು.
3. ಡೈರೆಕ್ಟರ್ ಆಫ್ K.G.I.D. ವಿಧಾನ ಸೌಧ ರೋಡ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಗಾಯತ್ರಿದೇವಿ ಇವರು ತಮ್ಮ ಯಜಮಾನರಾದ ಲಕ್ಷ್ಮೀಕಾಂತರಾಜ ಅರಸ್ ಇವರು ಪ್ರತಿವಾದಿ 1 ಇವರ ಜೀಪ್ ಸಂ: KA-02-6 G-88 ಜೀಪಿನಲ್ಲಿ ಡ್ರೈವರ್ ಆಗಿ ದಿನಾಂಕ 29.1.2004 ರಂದು ಉದ್ಯೋಗ ಸಮಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಹಾಗೂ ಕರ್ತವ್ಯದ ವೇಳೆಯಲ್ಲಿ Massive Cardiac arrest ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

Labour Officer and Commissioner to Workmen's Compensation Tumkur District, Tumkur.

P.R. 592

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಅಕಾ:ಸಿಆರ್:31/05 ದಿನಾಂಕ: 7ನೇ ಮಾರ್ಚ್ 2005**

**ಅರ್ಜಿದಾರರು**

ವೀರೋ W/o ಲೇಟ್ ಕಾಶ್ಮೀರ್‌ಸಿಂಗ್ ವಯಸ್ಸು, 59 ವರ್ಷ
R/o, C/o ಅವತಾರ ಸಿಂಗ್ ಗುರುಜಂತ್ ಪಂಜಾಬಿ ಢಾಬಾ ಹೋಟೆಲ್ N.H.-4, ಉಜ್ಜನಕುಂಟೆ ತಾವರೆಕೆರೆ, ಶಿರಾ ತಾ।। ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಹರ್ಜಿಂದರ್ ಸಿಂಗ್ ಮೋಹನ್ ಸಿಂಗ್ C/o ಡಿಲ್ಲನ್ ಹೈವೇ ಕ್ಯಾರಿಯರ್ ರಾಮ ಕುಮಾರ್, ಸೆಂಟರ್ 1ನೇ ಫ್ಲೋರ್, 104, ಸೆಕ್ಟರ್ ನಂ.18 ವಾಸಿಜಿಲ್ಲೆ, ಥಾಣೆ.
2. ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ಶೆಲ್ಲರ್ ಬಿಲ್ಡಿಂಗ್ 2ನೇ ಫ್ಲೋರ್, ಗೋಖಲೆ ರೋಡ್, ಹಡಪದ ಥಾಣೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ವಿರೋ ಇವರು ತಮ್ಮ ಮಗ ಸೈಲಾನ್ @ ಶ್ರಮಾಲ ಸಿಂಗ್ ಇವರು ಪ್ರತಿವಾದಿ 1 ಇವರ ಲಾರಿ ಸಂ: MH-04 M-9461 ಲಾರಿಯಲ್ಲಿ ಚಾಲಕನಾಗಿ ದಿನಾಂಕ 3.2.2003 ರಂದು ಉದ್ಯೋಗ ಸಮಯದಲ್ಲಿ N.H. 4 ಬಾಣಪ್ಪನ ಹೋಟೆಲ್ ಮುಂಭಾಗದಲ್ಲಿ ಲಾರಿ ಪಾರ್ಕ್ ಮಾಡಿದಾಗ ಎದುರಿನಿಂದ ಬಂದ ಲಾರಿ KA04/2113 ಚಾಲಕ ಈ ಲಾರಿಗೆ ಡಿಕ್ಕಿ ಹೊಡೆದು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

Labour Officer and Commissioner to Workmen's Compensation Tumkur District, Tumkur.

P.R. 593

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಅಕಾ:ಸಿಆರ್:42/05 ದಿನಾಂಕ: 2ನೇ ಏಪ್ರಿಲ್ 2005**

**ಅರ್ಜಿದಾರರು**

1. ದುರ್ಗಮ್ಮ W/o ಲೇಟ್ ದುರ್ಗಯ್ಯ, 35 ವರ್ಷ
2. ರಂಗಯ್ಯ S/o ಲೇಟ್ ದುರ್ಗಯ್ಯ, 20 ವರ್ಷ
3. ರತ್ನಮ್ಮ D/o ಲೇಟ್ ದುರ್ಗಯ್ಯ, 19 ವರ್ಷ
4. ಕರಲು ಕರಿಯಪ್ಪಾ,. 70 ವರ್ಷ
5. ಹನುಮಕ್ಕಾ W/o ಕರಲು ಕರಿಮಪ್ಪಾ, 60 ವರ್ಷ
6. ರಂಗಯ್ಯ S/o ಕರಲು ಕರಿಯಪ್ಪಾ, 38 ವರ್ಷ

**ಎಲ್ಲರ ವಿಳಾಸ:-** ಬೆಳಗುಳಿ C-N ಹಳ್ಳಿ ತಾಲ್ಲೂಕು ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀಮತಿ ನಾಗರತ್ನಮ್ಮ W/o C. ಜಯಣ್ಣ R/o ಬೆಳಗುಲಿ, ಪೋಸ್ಟ್, C.N. ಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ.
2. ಯುನೈಟೆಡ್ ಇಂಡಿಯಾ ಇನ್ಶ್ಯೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್ ರಾಘವೇಂದ್ರ ಕಾಲೋನಿ, B.H. ರೋಡ್, ತಿಪಟೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ದುರ್ಗಮ್ಮ ಹಾಗೂ ಇತರರು ಇವರು ತಮ್ಮ ಯಜಮಾನರಾದ ದುರ್ಗಯ್ಯ ಇವರು ಪ್ರತಿವಾದಿ 1 ಯ Tractor No: KA-06-T6090-6091 ರಲ್ಲಿ ಲೋಡರ್ ಅನ್ ಲೋಡರ್ ಆಗಿ ದಿನಾಂಕ 20.2.05 ರಂದು ಉದ್ಯೋಗ ಸಮಯದಲ್ಲಿ ಬೆಳಗುಳಿಯಿಂದ ಮಣ್ಣುಲೋಡ್ ಮಾಡಿ ಮಜ್ಜನಕಟ್ಟೆಗೆ ಅನ್‌ಲೋಡ್ ಮಾಡಲು ಹೋಗುವಾಗ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

Labour Officer and Commissioner to Workmen's Compensation Tumkur District, Tumkur.

P.R. 594

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್:44/05 ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು**

1. ಫರ್ಝುಲುನ್ನಿಸಾ W/o ಖಲೀಲ್ ಖಾನ್ ವಯಸ್ಸು 45 ವರ್ಷ.
2. ದಸ್ತಗೀರ್ ಖಾನ್ S/o ಖಲೀಲ್ ಖಾನ್ ವಯಸ್ಸು 25 ವರ್ಷ.

**ಇವರ ವಿಳಾಸ:** ಹಿರೇಹಳ್ಳಿ ಊರ್ಡಿಗೆರೆ ಹೋಬಳಿ ತುಮಕೂರು ತಾಲ್ಲೂಕು

**ವಿರುದ್ಧ**

**ಪ್ರತಿವಾದಿಗಳು**

1. ಸತ್‌ಗುರು ಶಿಪ್ಪಿಂಗ್ ಏಜೆನ್ಸೀಸ್ ಕೃಷ್ಣ ಚೇಂಬರ್ ಆಫೀಸ್-2 5ನೇ ಕ್ರಾಸ್, ಕೊನೆನಾ ಅಗ್ರಹಾರ ಏರ್ ಪೋರ್ಟ್ ರೋಡ್, ಬೆಂಗಳೂರು ಜಿಲ್ಲೆ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., 24, 2ನೇ ಫ್ಲೋರ್, ಶಬರಿ ಕಾಂಪ್ಲೆಕ್ಸ್, ರೆಸಿಡೆನ್ಸಿ ರೋಡ್, ಬೆಂಗಳೂರು-25.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಫರ್ಝುಲುನ್ನಿಸಾ ಇವರು ತಮ್ಮ ಯಜಮಾನರಾದ ಖಲೀಲ್‌ಖಾನ್ ಇವರು ಪ್ರತಿವಾದಿ 1 ಇವರ ಲಾರಿಯಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 25.8.04 ರಂದು ಉದ್ಯೋಗ ಸಮಯದಲ್ಲಿ ಪುಣೆ-ಮುಂಬೈ ರಾಷ್ಟ್ರೀಯ ಹೆದ್ದಾರಿ ಗೂನ್ ಖಾಮಶೆಟ್ ವಾವಳ ತಾ॥ಪುಣೆ ಜಿಲ್ಲೆ ವ್ಯಾಪ್ತಿಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

Labour Officer and Commissioner to Workmen's Compensation Tumkur District, Tumkur.

P.R. 595

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆಸದೆ ಇರುವ ಕಾರಣ ಕಲಂ 31(1)ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಸನಿ47/ ಚುನಾವಣೆ/39/2004-05 ದಿ: 27.1.2005.
2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 31.3.2005.
3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯು/37/ಸಿಎಲ್ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯು/69/ಸಿಎಲ್ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಬನವತಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ:31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಸದರಿ ಸಂಘದ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ದಿನಾಂಕವನ್ನು ನಿಗದಿಪಡಿಸಲಾಗಿತ್ತು. ಆದರೆ ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು ಸಂಘದ ಉಪನಿಯಮದಂತೆ ಚುನಾವಣೆಯಲ್ಲಿ 8 ಮಂದಿ ಆಯ್ಕೆಯಾಗಬೇಕಾಗಿದ್ದು, ನಡೆಸಿದ ಚುನಾವಣಾ ಪ್ರಕ್ರಿಯೆಗಳಲ್ಲಿ ಅಂತಿಮವಾಗಿ ಇಬ್ಬರು ಅಭ್ಯರ್ಥಿಗಳು ಆಯ್ಕೆಯಾಗಬಹುದಾಗಿದ್ದು ಉಳಿದ 06 ಸ್ಥಾನಗಳು ಖಾಲಿ ಇದ್ದು ಇದರಿಂದ ಆಡಳಿತ ಮಂಡಳಿಯಲ್ಲಿ ಬಹುಮತವಿಲ್ಲದೆ, ಶೂನ್ಯಾವಸ್ಥೆ ಉಂಟಾಗಿರುವ ಕಾರಣ ಕಾನೂನಿನ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಸದರಿ ಸಂಘದ ಆಡಳಿತ ಮಂಡಳಿಯಲ್ಲಿ ಬಹುಮತಕ್ಕೆ ಕೊರತೆಯಾಗಿ ಶೂನ್ಯಾವಸ್ಥೆ ಉಂಟಾಗಿರುವುದರಿಂದ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದ ದೈನದಿಂದ ವ್ಯವಹಾರ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 31(1)ರನ್ವಯ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

### ಕ್ರಮಾಂಕ:ಸನಿ47/ಅಮರ/06/2005-06, ದಿನಾಂಕ: 1ನೇ ಏಪ್ರಿಲ್ 2005

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚೆನ್ನಬೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 31(1) ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬನವತಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಳ್ಳಾಪುರ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ ಶ್ರೀ ಕೆ. ರಾಜಣ್ಣ, ಮೇಲ್ವಿಚಾಲಕರು, ಬೆಂಗಳೂರು ಜಿಲ್ಲಾ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ ದೊಡ್ಡಬಳ್ಳಾಪುರ ಶಾಖೆ, ದೊಡ್ಡಬಳ್ಳಾಪುರ, ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ವಿಶೇಷಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ವಿಶೇಷಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶದಲ್ಲಿ ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

**ಎಂ. ಚೆನ್ನಬೈರಯ್ಯ**

ಪಿ.ಆರ್. 601 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆಸದೆ ಇರುವ ಕಾರಣ ಕಲಂ 31(1)ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಸನಿ47/ ಚುನಾವಣೆ/39/2004-05 ದಿ: 27.1.2005.
2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 13.3.2005.
3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯು/37/ಸಿಎಲ್ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯು/69/ಸಿಎಲ್ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಬರಗೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ನೆಲಮಂಗಲ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ:31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಸದರಿ ಸಂಘದ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ದಿನಾಂಕವನ್ನು ನಿಗದಿಪಡಿಸಲಾಗಿತ್ತು. ಆದರೆ ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು ಸಂಘದ ಉಪನಿಯಮದಂತೆ ಚುನಾವಣೆಯಲ್ಲಿ 8 ಮಂದಿ ಆಯ್ಕೆಯಾಗಬೇಕಾಗಿದ್ದು, ನಡೆಸಿದ ಚುನಾವಣಾ ಪ್ರಕ್ರಿಯೆಗಳಲ್ಲಿ ಅಂತಿಮವಾಗಿ ಇಬ್ಬರು ಅಭ್ಯರ್ಥಿಗಳು ಆಯ್ಕೆಯಾಗಬಹುದಾಗಿದ್ದು ಉಳಿದ 06 ಸ್ಥಾನಗಳು ಖಾಲಿ ಇದ್ದು ಇದರಿಂದ ಆಡಳಿತ ಮಂಡಳಿಯಲ್ಲಿ ಬಹುಮತವಿಲ್ಲದೆ, ಶೂನ್ಯಾವಸ್ಥೆ ಉಂಟಾಗಿರುವ ಕಾರಣ ಕಾನೂನಿನ ಪ್ರಕಾರ ಸೂಕ್ತ ಕ್ರಮ

ಕೈಗೊಳ್ಳಲು ಕೋರಿರುತ್ತಾರೆ. ಸದರಿ ಸಂಘದ ಆಡಳಿತ ಮಂಡಳಿಯಲ್ಲಿ ಬಹುಮತಕ್ಕೆ ಕೊರತೆಯಾಗಿ ಶೂನ್ಯಾವಸ್ತೆ ಉಂಟಾಗಿರುವುದರಿಂದ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದ ದೈನದಿಂದ ವ್ಯವಹಾರ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 31(1)ರನ್ವಯ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ:ಸನಿ47/ಆಮರ/07/2005-06, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚನ್ನಬೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 31(1) ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬರಗೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ನೆಲಮಂಗಲ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ ಮೇಲ್ವಿಚಾಲಕರು, ಬೆಂಗಳೂರು ಜಿಲ್ಲಾ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ ತ್ಯಾಮಗೊಂಡ್ಲು ಶಾಖೆ, ನೆಲಮಂಗಲ ತಾಲ್ಲೂಕು, ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ವಿಶೇಷಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ವಿಶೇಷಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

**ಎಂ. ಚನ್ನಬೈರಯ್ಯ**

ಪಿ.ಆರ್. 602 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆಸದೆ ಇರುವ ಕಾರಣ ಕಲಂ 31(1)ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಸನಿ47/ ಚುನಾವಣೆ/39/2004-05 ದಿ: 1.2.2005.
2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 31.3.2005.
3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯು/37/ಸಿಎಲ್‌ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಚನ್ನರಾಯಪಟ್ಟಣ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಸಂಘ ನಿ, ದೇವನಹಳ್ಳಿ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ:31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಸದರಿ ಸಂಘದ ಆಡಳಿತ ಮಂಡಳಿಗೆ ಚುನಾವಣೆಯನ್ನು ನಡೆಸಲು ದಿನಾಂಕವನ್ನು ನಿಗದಿಪಡಿಸಲಾಗಿತ್ತು. ಆದರೆ ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು ಸಂಘದ ಉಪನಿಯಮದಂತೆ ಚುನಾವಣೆಯಲ್ಲಿ 8 ಮಂದಿ ಆಯ್ಕೆಯಾಗಬೇಕಾಗಿದ್ದು, ನಡೆಸಿದ ಚುನಾವಣಾ ಪ್ರಕ್ರಿಯೆಗಳಲ್ಲಿ ಅಂತಿಮವಾಗಿ ಒಬ್ಬರು ಅಭ್ಯರ್ಥಿ ಆಯ್ಕೆಯಾಗಬಹುದಾಗಿದ್ದು ಉಳಿದ 07 ಸ್ಥಾನಗಳು ಖಾಲಿ ಇದ್ದು ಇದರಿಂದ ಆಡಳಿತ ಮಂಡಳಿಯಲ್ಲಿ ಬಹುಮತವಿಲ್ಲದೆ, ಶೂನ್ಯಾವಸ್ತೆ ಉಂಟಾಗಿರುವ ಕಾರಣ ಕಾನೂನಿನ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಸದರಿ ಸಂಘದ ಆಡಳಿತ ಮಂಡಳಿಯಲ್ಲಿ ಬಹುಮತಕ್ಕೆ ಕೊರತೆಯಾಗಿ ಶೂನ್ಯಾವಸ್ತೆ ಉಂಟಾಗಿರುವುದರಿಂದ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದ ದೈನಂದಿನ ವ್ಯವಹಾರ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 31(1)ರನ್ವಯ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ:ಸನಿ47/ಆಮರ/08/2005-06, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚನ್ನಬೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 31(1) ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಚನ್ನರಾಯಪಟ್ಟಣ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ (ನಿ), ದೇವನಹಳ್ಳಿ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ ಮೇಲ್ವಿಚಾಲಕರು, ಬೆಂಗಳೂರು ಜಿಲ್ಲಾ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ ವಿಜಯಪುರ ಶಾಖೆ, ದೇವನಹಳ್ಳಿ ತಾಲ್ಲೂಕು ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ವಿಶೇಷಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ವಿಶೇಷಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ

ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

ಎಂ. ಚನ್ನಭೈರಯ್ಯ

ಪಿ.ಆರ್. 603 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

## DEPARTMENT OF COMMERCIAL TAXES

**Office of the Asst. Commissioner of Commercial Taxes, Ist Circle, U.R.R Complex, Udupi**

**Notification No. ACCT.1/2004-05 dated: 24th March 2005**

In pursuance of the provisions contained in rule 6 of the Central Sales Tax (Karnataka) Rules 1957, it is hereby notified for general information that the following declaration Form 'C' referred to subsection (4) of section 8 of the Central Sales tax Act 1956 are declared to be invalid and void the reasons that there 2 'C' forms were last while in transit.

The details are as under.

| Nos (including Code No) of declaration for a lost | Name and addressed of the dealer to when declaration form are issued by the department with date of issue | Registration Certificate No of the dealer under CST act 1956 | The addresed of the dealer in when the declaration are sent |
|---|---|---|---|
| 1. TCK 04 63240 | M/s Udupi Sports Maruthi Veethika Udupi Date 24.9.2003 | 31961812 | 1) M/s Brasem Bereque inter intienal Maradabad U.P. |
| 2. TCK 0463250 | | | 2) M/s Handicrafts India, Marahabad U.P. |

| Date of issue forms by the dealer | Whether lost destayed ar/stolen | Remarks |
|---|---|---|
| Rs. 26.9.2003 | Lost | Date of Intination read: 3.11.2004 Date from which 'C' form are invalidated 26.9.2003. |

P.R. 606 Asst. Commissioner of Comml. Taxes I Circle, UDUPI.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪುರಪ್ಪೆಮನೆ, ಹೊಸನಗರ ತಾ: ಇದರ ನೊಂದಣಿ ರದ್ದತಿ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/33/2002-03/ ದಿನಾಂಕ:25.10.2002.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ:ಎಆರ್25/ಸಮಾಪನೆ/ರದ್ಧತಿ/ಸಿಆರ್-58/ 2003-04 ದಿನಾಂಕ: 29.03.2005.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪುರಪ್ಪೆಮನೆ, ಹೊಸನಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ನಂ.ಎಆರ್‌ಎಸ್/5/16307/90-91 ದಿನಾಂಕ:14.01.1991ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ ಶಿಮೂಲ್ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:11.02.2004 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:1.3.2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/33/2002-03/54, ದಿನಾಂಕ: 31ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯು/69/ಸಿಎಲ್‌ಎಂ/ 2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು,

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪುರಪ್ಪೆಮನೆ, ಹೊಸನಗರ ತಾಲ್ಲೂಕು ಇದರ ನೊಂದಣಿ ನಂ.ಎಆರ್‌ಎಸ್/25/16307/90-91/ದಿನಾಂಕ:14.01.1991ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 30ನೇ ಮಾರ್ಚ್ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 607 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ವಿಷಯ:** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ನಿಧಿಗೆ ಶಿವಮೊಗ್ಗ ತಾ: ಇದರ ನೊಂದಣಿ ರದ್ಧತಿ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/1891/2004-05/ ದಿನಾಂಕ:11.3.2005.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ:ಎಆರ್24/ಸಮಾಪನೆ/ರದ್ಧತಿ/ಸಿಆರ್-218/ 2003-04 ದಿನಾಂಕ: 30.03.2005.

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ನಿಧಿಗೆ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.ಎಆರ್‌ಎಸ್.24/28667/2000-01 ದಿನಾಂಕ:30.12.2000ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ-1ನೇ ವೃತ್ತ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:16.03.2005 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:18.3.2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/1891/2004-05/55, ದಿನಾಂಕ: 31ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯು/69/ಸಿಎಲ್‌ಎಂ/ 2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ನಿಧಿಗೆ ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ನಂ.ಎಆರ್‌ಎಸ್/24/28667/2000-01/ದಿನಾಂಕ:30.12.2000ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 608 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪಿಳ್ಳಂಗೆರೆ ಶಿವಮೊಗ್ಗ ತಾ: ಇದರ ನೊಂದಣಿ ರದ್ಧತಿ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/54/2001-02/ ದಿನಾಂಕ:13.11.2001.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ:ಎಆರ್24/ಸಮಾಪನೆ/ರದ್ಧತಿ/ಸಿಆರ್-38/ 2003-04 ದಿನಾಂಕ: 24.03.2005.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪಿಳ್ಳಂಗೆರೆ ಶಿವಮೊಗ್ಗ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.ಎಆರ್‌ಎಸ್/24/25248/98-99 ದಿನಾಂಕ:11.09.1998ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ ಶಿಮೂಲ್ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:10.11.2004 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:22.3.2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/54/2001-02/56, ದಿನಾಂಕ: 30ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯು/69/ಸಿಎಲ್‌ಎಂ/ 2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಪಿಳ್ಳಂಗಿರಿ, ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ನಂ.ಎಆರ್‌ಎಸ್/24/25248/98-99/ದಿನಾಂಕ:11.09.1998ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 30ನೇ ಮಾರ್ಚ್ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 609 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಇಟ್ಟಿಗೆಹಳ್ಳಿ ಭದ್ರಾವತಿ ತಾ: ಇದರ ಪುನಃಶ್ಚೇತನದ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/55/2001-02/ ದಿನಾಂಕ:24.10.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ:ಎಆರ್24/ಸಮಾಪನೆ/ಸಿಆರ್-38/ 2004-05 ದಿನಾಂಕ: 15.03.2005.
3. ವ್ಯವಸ್ಥಾಪಕರು, ಶಿಮೂಲ್ ಶಿವಮೊಗ್ಗ, ಇವರ ಪತ್ರ ದಿ:11.3.005.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಇಟ್ಟಿಗೆಹಳ್ಳಿ ಭದ್ರಾವತಿ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.7283/89-90 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ ಶಿಮೂಲ್ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:15.7.2003 ರಂದು ಪ್ರಭಾರ ವಹಿಸಿಕೊಂಡಿರುತ್ತಾರೆ. ಈ ಸಂಘದ ಸದಸ್ಯರು ಹಾಗೂ ಹಿಂದಿನ ಆಡಳಿತ ಮಂಡಳಿಯ ನಿರ್ದೇಶಕರುಗಳು ಸಮಾಪನೆಯಿಂದ ಈ ಸದಸ್ಯರಿಗೆ ತೊಂದರೆಯಾಗಿದ್ದು, ತುಂಬಾ ಕಷ್ಟವನ್ನು ಅನುಭವಿಸಲಾಗುತ್ತಿದೆ. ಅಲ್ಲದೆ ಸಂಘದಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಹಾಲು ಸಂಗ್ರಹಣೆ ಮತ್ತು ಮಾರಾಟ ವ್ಯವಹಾರ ಸಹ ತೊಂದರೆಯಾಗಿದ್ದು ಪುನಃಶ್ಚೇತನಕ್ಕಾಗಿ ಮನವಿ ಮಾಡಿಕೊಂಡಿರುತ್ತಾರೆ. ಈ ಸಂಘದ ಆಸ್ತಿತ್ವದಿಂದ ಮಾತ್ರ ಸದಸ್ಯರಿಗೆ ಹಾಲು ಮಾರಾಟ ಮಾಡಲು ಅನುಕೂಲವಾಗುತ್ತಿದ್ದು, ಪುನಃಶ್ಚೇತನಕ್ಕಾಗಿ ಮನವಿ ಮಾಡಿರುತ್ತಾರೆ. ಈ ಮನವಿಯ ಅಧಾರಿತವಾಗಿ ಉಲ್ಲೇಖ (2)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ಗ್ರಾಮಸ್ಥರ ಕೋರಿಕೆಯ ಮೇರೆಗೆ ಪುನಃಶ್ಚೇತನಕ್ಕಾಗಿ ಶಿಫಾರಸ್ ಮಾಡಿರುತ್ತಾರೆ. ಉಲ್ಲೇಖ (3)ರ ಪತ್ರದಲ್ಲಿ ಶಿಮೂಲ್ ಶಿವಮೊಗ್ಗ ರವರು, ಹಾಲು ಸಂಗ್ರಹಣೆ ಕಾರ್ಯವನ್ನು ಮಾಡುವುದಾಗಿ ತಿಳಿಸಿ ಪುನಃಶ್ಚೇತನಗೊಳಿಸಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದಕಾರಣ ಈ ಸಂಘ ಅಸ್ತಿತ್ವದಲ್ಲಿ ಮುಂದುವರೆಯಬೇಕೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/54/2001-02/56, ದಿನಾಂಕ: 30ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯು/69/ಸಿಎಲ್‌ಎಂ/ 2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಇಟ್ಟಿಗೆಹಳ್ಳಿ ಭದ್ರಾವತಿ ತಾಲ್ಲೂಕು ಇದರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಆದೇಶಿಸಿರುತ್ತೇನೆ.

1. ಹೆಚ್ಚುವರಿಯಾಗಿ ರೂ.1500-00 ಷೇರು ಸಂಗ್ರಹಿಸಲು ಷರತ್ತು ವಿಧಿಸಿದೆ.
2. ಈ ಸಂಘದ ಲೆಕ್ಕ ಪತ್ರಗಳನ್ನು ತಹಲ್ ವರೆಗೆ ಆಡಿಟ್ ಮಂಡಿಸುವುದು.
3. ಈ ಸಂಘದ ಸಿಬ್ಬಂದಿಯವರ ವೇತನ ಹಾಗೂ ಬಲವೃಂದವನ್ನು ಇಲಾಖೆಯಿಂದ ಅನುಮತಿ ಪಡೆಯುವುದು.
4. ಪುನಃಶ್ಚೇತನಗೊಳಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಆಡಳಿತ ಮಂಡಳಿಯನ್ನು ರಚಿಸಿ ಸಂಘದ ಕಾರ್ಯಾಚರಣೆಯನ್ನು ಪ್ರಾರಂಭಿಸುವುದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿಯ ಪುನರ್ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 610 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪ್ರಸ್ತಾವನೆ:**

ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ, ಹರಿಹರ ತಾಲ್ಲೂಕು ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರಡಿಯಲ್ಲಿ ನೊಂದಣಿಯಾಗಿರುತ್ತದೆ. ಈ ಬ್ಯಾಂಕಿನಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಕೆ. ಮಂಜುನಾಥ್ ಬಿನ್ ಕರಿಬಸಪ್ಪ ಕಂದಗಲ್ಲು, ದಾವಣಗೆರೆ ತಾಲ್ಲೂಕು ಇವರು ತಮ್ಮ ಅವಧಿಯಲ್ಲಿ ದುರುಪಯೋಗಪಡಿಸಿಕೊಂಡ ಬ್ಯಾಂಕಿನ ಹಣದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 64ರ ವಿಚಾರಣೆಗೆ ಹಾಗೂ ಕಲಂ 63ರ ಆಡಿಟ್ ವರದಿಯಲ್ಲಿ ನಮೂದಿಸಿದ ಹಣದ ವಸೂಲಾತಿಗಾಗಿ ಸಹಕಾರ ಸಂಘಗಳ ಕಾಯ್ದೆ ಕಲಂ 69ರಡಿಯಲ್ಲಿ ಈ ನ್ಯಾಯಾಲಯದಲ್ಲಿ ಅಧಿಭಾರ ಅರ್ಜಿ ಸಂಖ್ಯೆ 39/87-88 ಹಾಗೂ 12/92-93 ಕಲಂಗಳಲ್ಲಿ ಡಿಕ್ರಿಯಾಗಿರುತ್ತದೆ. ಸದರಿ ಡಿಕ್ರಿ ಆದೇಶದ ಅನುಸಾರ ಸಂಘದ ದುರುಪಯೋಗದ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ 167/90-91 ಹಾಗೂ 373/94-95ರಂತೆ ಅಮಲ್ಜಾರಿ ಕ್ರಮಕೈಗೊಂಡಿರುತ್ತಾರೆ.

ಅದರಂತೆ ಈ ಕಛೇರಿಯ ಮಾರಾಟಾಧಿಕಾರಿಗಳು ಕೆಳಕಂಡ ಸ್ಥಿರಾಸ್ಥಿಗಳನ್ನು ದಿನಾಂಕ:27.12.1991, 14.12.1994, 24.02.1996 ನಂತರ 27.10.2004 ರಂದು ಹರಾಜು ಇಡಲಾಗಿತ್ತು. ಸದರಿ ದಿನಾಂಕಗಳಂದು ಯಾವುದೇ ಬಿಡ್ಡುದಾರರು ಭಾಗವಹಿಸದಿರುವುದರಿಂದ ಅರ್ಜಿದಾರರಾದ ವ್ಯವಸ್ಥಾಪಕರು ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ, ಹರಿಹರ ತಾಲ್ಲೂಕು ಇವರು ಸದರಿ ಹರಾಜು ಸ್ಥಿರಾಸ್ಥಿಯನ್ನು ರೂ.6,65,606-00 ಗಳಿಗೆ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ನಿರ್ಣಯ ಕೈಗೊಂಡಿರುತ್ತಾರೆ. ಈ ಮಧ್ಯೆ ಉಪನೊಂದಾಣಾಧಿಕಾರಿಗಳು ಹಾಗೂ ತೋಟಗಾರಿಕೆ ಇಲಾಖೆಯಿಂದ ಮಾರುಕಟ್ಟೆ ಮೌಲ್ಯದ ದೃಢೀಕರಣ ಪತ್ರಗಳನ್ನು ಸಲ್ಲಿಸಿದ್ದು, ಸದರಿ ದೃಢೀಕರಣ ಪತ್ರಗಳ ಪ್ರಕಾರ ಸದರಿ ಸ್ಥಿರಾಸ್ತಿಯ ಒಟ್ಟು ಮೌಲ್ಯ ರೂ.4,34,789-00 ಇರುತ್ತದೆ. ಇದಕ್ಕನುಸಾರವಾಗಿ ಮಾರಾಟಾಧಿಕಾರಿಗಳು ದಾವಾ ಸೂತ್ರ ದಾವಣಗೆರೆ ತಾಲ್ಲೂಕು ಕಂದಗಲ್ ಗ್ರಾಮದ ಸರ್ವೆ ನಂ.220/1ರ5 ಎಕರೆ 6 ಗುಂಟೆಯನ್ನು ಅರ್ಜಿದಾರರ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಮೇಲ್ಕಂಡ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101(ಬಿ)ರ ಪ್ರಕಾರ ವರ್ಗಾವಣೆ ಮಾಡುವ ಬಗ್ಗೆ ಸಿಬ್ಬಂದಿಯವರಿಗೆ ಈ ಕಛೇರಿಯಿಂದ ದಿನಾಂಕ:22.01.2005ರಂದು ಅಂತಿಮ ತಿಳುವಳಿಕೆ ನೋಟೀಸ್ ನೀಡಲಾಗಿತ್ತು. ಈ ಸಂಬಂಧ ಸದರಿಯವರು ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ ಹಾಗೂ ಮಾರಾಟಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಗಣಿಸಿ ಮತ್ತು ಅರ್ಜಿದಾರರ ಬ್ಯಾಂಕಿನ ಹಿತದೃಷ್ಟಿಯಿಂದ ಸದರಿ ಸ್ಥಿರಾಸ್ತಿಯನ್ನು ಮಾರುಕಟ್ಟೆ ದರಕ್ಕೆ ಅನುಗುಣವಾಗಿ ಅರ್ಜಿದಾರರ ಬ್ಯಾಂಕಿಗೆ ಕರ್ನಾಟಕ ಸಹಕಾರ ಸಂಘದ ಕಾಯ್ದೆ 1959ರ ಕಲಂ 101(ಬಿ) ರಡಿಯಲ್ಲಿ ವರ್ಗಾಹಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶ ಮಾಡಿದೆ.

**ಆದೇಶ**

**ಕ್ರ.ಸಂ. :ಎ.ಆರ್-31/ದಾವಾ/ಅಮಲ್ಜಾರಿ/145/2004-05, ದಿನಾಂಕ: 24ನೇ ಫೆಬ್ರವರಿ 2005**

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1959ರ ಕಲಂ 101(ಬಿ) ಹಾಗೂ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/509/6ಎಲ್ಎಂ/96 ದಿನಾಂಕ: 21.3.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪವಿಭಾಗ ದಾವಣಗೆರೆ ಆದ ನಾನು ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ ಹರಿಹರ ತಾಲ್ಲೂಕು ಇವರ ಅಧಿಭಾರ ಅರ್ಜಿ ಸಖ್ಯೆ 39/87-88 ಮತ್ತು 12/92-93 ಹಾಗೂ ಅಮಲ್ಜಾರಿ ಸಂಖ್ಯೆ 167/90-91 ಹಾಗೂ 373/94-95ರ ಪ್ರಕಾರ ದಿನಾಂಕ: 27.10.2004ರಂದು ಹರಾಜು ಮಾಡಿರುವ ದಾವಣಗೆರೆ ತಾಲ್ಲೂಕು ಕಂದಗಲ್ಲು ಗ್ರಾಮದ ಸರ್ವೆ ನಂ.220/1ರ5 ಎಕರೆ 6 ಗುಂಟೆಯ ಸ್ಥಿರಾಸ್ತಿಯನ್ನು ಮಾರುಕಟ್ಟೆ ದರ ರೂ.4,34,789-00 ಗಳಿಗೆ ಅರ್ಜಿದಾರರ ಬ್ಯಾಂಕ್ ಆದ ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ, ಹರಿಹರ ತಾಲ್ಲೂಕು ಇದರ ಹೆಸರಿಗೆ ವರ್ಗಾವಣೆ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ 8ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿದ ಸ್ಥಿರಾಸ್ತಿಗಳನ್ನು ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ಜಿಗಳಿ ಹರಿಹರ ತಾ॥ತನ್ನ ಹೆಸರಿಗೆ ವರ್ಗಾಯಿಸಿಕೊಂಡು ಹಣ ದುರುಪಯೋಗದ ಹಣವನ್ನು ತೀರುವಳಿ ಮಾಡಿಕೊಳ್ಳಲು ನಿಗಧಿಗೊಳಿಸಿದೆ ಹಾಗೂ ಪೂರ್ಣ ಮೊತ್ತ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ವಸೂಲಿಯಾಗದಿದ್ದಲ್ಲಿ ಸದರಿ ಶ್ರೀ ಕೆ. ಮಂಜುನಾಥ ಮಾಜಿ ಕಾರ್ಯದರ್ಶಿ ಇವರ ಇನ್ನಿತರೆ ಚರ-ಸ್ಥಿರಾಸ್ತಿಗಳನ್ನು ಪತ್ತೆ ಮಾಡಿ ಸದರಿ ಆಸ್ತಿಗಳ ಜಪ್ತಿ, ಮಾರಾಟ, ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳಬೇಕೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:24.02.2005ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಕ್ರ.ಸಂ. :ಎ.ಆರ್-31/ದಾವಾ/ಅಮಲ್ಜಾರಿ/145/2004-05, ದಿನಾಂಕ: 24ನೇ ಫೆಬ್ರವರಿ 2005**

**ನಮೂನೆ - 8**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38 ಇದರ ರೀತ್ಯಾ**

ಹರಿಹರ ತಾಲ್ಲೂಕು ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ ಇದರ ಮಾಜಿ ಕಾರ್ಯದರ್ಶಿ ಶ್ರೀ ಕೆ. ಮಂಜುನಾಥ ಇವರು ಪತ್ರದಲ್ಲಿ ದುರುಪಯೋಗಪಡಿಸಿಕೊಂಡಿರುವ ಹಣದ ವಸೂಲಿಗಾಗಿ ಕಾಯ್ದೆ 1959ರ 69ರಡಿಯಲ್ಲಿ ಅಧಿಭಾರ ಸಂಖ್ಯೆ 31/87-88 ಹಾಗೂ 12/92-93ರ ಮೇಲೆ ಅಮಲ್ಜಾರಿ ಸಂಖ್ಯೆ 167/90-91 ಹಾಗೂ 373/92-93 ರಡಿಯಲ್ಲಿ ದಿನಾಂಕ: 27.10.2004 ಬಹಿರಂಗ ಹರಾಜು ನಡೆಸಿದ್ದು, ಯಾರು ಬಿಡ್ಡುದಾರರು ಭಾಗವಹಿಸದ ಕಾರಣ ಅರ್ಜಿದಾರರ ಬ್ಯಾಂಕ್ ಅಂದರೆ ವ್ಯವಸ್ಥಾಪಕರು ಜಿಗಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಜಿಗಳಿ ಇವರು ದಾವಾ ಸ್ಥಿರಾಸ್ತಿಯನ್ನು ಮಾರುಕಟ್ಟೆ ಮೌಲ್ಯ ರೂ.4,34,789-00ಗಳು (ನಾಲ್ಕು ಲಕ್ಷದ ಮೂವತ್ತ ನಾಲ್ಕು ಸಾವಿರದ ಏಳುನೂರು) ಎಂಬತ್ತೊಂಬತ್ತು ರೂ.ಗಳು ಮಾತ್ರ)ಗಳಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ದಾವಣಗೆರೆ ತಾಲ್ಲೂಕು ಕಂದಗಲ್ಲು ಗ್ರಾಮದ ಸರ್ವೆ ನಂ.220/1ರ 5 ಎಕರೆ 6 ಗುಂಟೆ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಅನುಬಂಧ**

**ಷರತ್ತುಗಳು:**

1. ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಹಣ ದುರುಪಯೋಗದ ಸಂಬಂಧ ಜಮಾ-ಖರ್ಚುಗಳನ್ನು ಮಾಡಿಕೊಂಡ ಹೆಚ್ಚುವರಿ ಹಣವನ್ನು ಬ್ಯಾಂಕಿಗೆ ಕೊಡಬೇಕಾದ ಬಾಕಿ ಉಳಿದುಕೊಂಡಲ್ಲಿ ತೀರ್ಪುಗಾರರಿಗೆ ತಿಳಿಸತಕ್ಕದ್ದು.
2. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದಕ್ಕೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.
3. ಬ್ಯಾಂಕ್ ಸ್ಥಿರಾಸ್ತಿಗಳನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
5. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
6. ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕ್ ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಈ ಸರ್ಟಿಫಿಕೇಟ್‌ನ್ನು ದಿನಾಂಕ: 4.2.2005ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿ.ಆರ್. 636

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ, ಇವರ ನ್ಯಾಯಾಲಯ**

**ಅಧಿಭಾರ ಅರ್ಜಿ ನಂ:1:02-03**

**ಅರ್ಜಿದಾರರು:**
ವ್ಯವಸ್ಥಾಪಕರು,
ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ಹಸೂಡಿ,
ಶಿವಮೊಗ್ಗ ತಾ:

**ಎದುರು ಅರ್ಜಿದಾರರು:**
1. ರಾಜಶೇಖರಯ್ಯ,
ಮಾಜಿ ವ್ಯವಸ್ಥಾಪಕರು,
ವಿ.ಎಸ್.ಎಸ್. ಬಿ.ಎನ್. ಹಸೂಡಿ ಶಿವಮೊಗ್ಗ ತಾ:
2. ಎ. ನಾರಾಯಣ
ಮಾಜಿ ಅಧ್ಯಕ್ಷರು,
ವಿಎಸ್‌ಎಸ್‌ಬಿಎನ್ ಹಸೂಡಿ ಶಿವಮೊಗ್ಗ ತಾ:

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪುಪೂರ್ವ ಜಪ್ತಿ ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕ್ ಈ ನ್ಯಾಯಾಲಯದಲ್ಲಿ, ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಬ್ಯಾಂಕಿನ ಕಾಯ್ದೆ ಕಲಂ 64ರ ವಿಚಾರಣೆಯಲ್ಲಿ 1998-99ನೇ ಸಾಲಿನಲ್ಲಿ ಸಾಲ ನೀಡಿಕೆಯಲ್ಲಿನ ಅವ್ಯವಹಾರದ ವಸೂಲಿ ಬಗ್ಗೆ ಅಧಿಭಾರ ಅರ್ಜಿ ಹೂಡಿ ಈ ಸಂಬಂಧವಾಗಿ ಅರ್ಜಿದಾರರು ಅರ್ಜಿಯೊಂದನ್ನು ಸಲ್ಲಿಸಿ ಎದುರು ಅರ್ಜಿದಾರರ ಹೆಸರಿನಲ್ಲಿರುವ ಸ್ಥಿರಾಸ್ತಿ ವಿವರ ಸಲ್ಲಿಸಿದ್ದು ಅದರಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪುಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಲು ಕೋರಿದ್ದಾರ ಮೇರೆಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ಷರತ್ತು ಪೂರ್ವಕ ಜಪ್ತಿ ಆಜ್ಞೆಯ ನೋಟೀಸನ್ನು ದಿ:20.4.2004 ರಂದು ಈ ನ್ಯಾಯಾಲಯ ಹೊರಡಿಸಿದ್ದು ಸದರಿ ಆಜ್ಞೆಯ ನೋಟೀಸನ್ನು ಎದುರಿಗಳು ಪಡೆದು ಅದರಲ್ಲಿನ ಷರತ್ತುಗಳನ್ನು ಪೂರೈಸಲು ವಿಫಲರಾಗಿರುವುದರಿಂದ ದಿ:20.4.2004 ರಂದು ಹೊರಡಿಸಿದ ಷರತ್ತು ಪೂರ್ವ ಜಪ್ತಿ ಆಜ್ಞೆಯ ನೋಟೀಸನ್ನು ಹಾಗೂ ಈ ನ್ಯಾಯಾಲಯದ ಆದೇಶ ದಿ:21.3.2005 ರನ್ವಯ ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ:ಸನಿಶಿ24:ಎಬಿಎನ್:ಎಬಿಜೆ:03-04, ದಿನಾಂಕ: 21ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪ ವಿಭಾಗ ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎದುರು ಅರ್ಜಿದಾರರ ಹೆಸರಿನಲ್ಲಿರುವ ಈ ಕೆಳಕಂಡ 'ಅನುಸೂಚಿ'ಯಲ್ಲಿ ತೋರಿಸಿದ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ ದಿ:20.4.2004 ರ ಷರತ್ತು ಪೂರ್ವ ಜಪ್ತಿ ಆಜ್ಞೆಯ ನೋಟಿಸನ್ನು ಸ್ಥಿರೀಕರಿಸಿ ಆದೇಶಿಸಿದೆ.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಅನುಸೂಚಿ**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ ನಂ | ವಿಸ್ತೀರ್ಣ | ತರಹೆ |
|---|---|---|---|---|---|
| | ಕೆ.ಎಸ್. ರಾಜಶೇಖರಯ್ಯ ಬಿನ್ ಸಿದ್ದಪ್ಪಯ್ಯ | ಶಿವಮೊಗ್ಗ ನಗರ ಎಲ್.ಎಲ್.ಆರ್. ರಸ್ತೆ ವಾರ್ಡ್ ನಂ:29 | ಖಾತೆ ನಂ 1270 1232 955 | - | ಮಂಗಳೂರಿನ ಹಂಚಿನ ಮನೆ |

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ ನಂ | ವಿಸ್ತೀರ್ಣ | ತರಹೆ |
|---|---|---|---|---|---|
| | | ಇದಕ್ಕೆ ಚೆಕ್ ಬಂದಿ<br>ಪೂರ್ವ : ಎಲ್.ಎಲ್.ಆರ್. ರಸ್ತೆ<br>ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ ರಸ್ತೆ<br>ದಕ್ಷಿಣಕ್ಕೆ : ವೀರಣ್ಣ ನವರ ಮನೆ<br>ಉತ್ತರಕ್ಕೆ : ಬಸವಣ್ಣ ನವರ ಮನೆ | | | |
| | ಎ. ನಾರಾಯಣ | ಶಿವಮೊಗ್ಗ ತಾ: ನಿಧಿಗೆ ಹೋಬಳಿ | ಸರ್ವೆ ನಂ.18 | 3.20 | ತರಿ |

ಈ ಆದೇಶವನ್ನು ಈ ದಿನ ದಿನಾಂಕ:21.3.2005 ರಂದು ಸ್ವಸಹಿ ಹಾಗೂ ನ್ಯಾಯಾಲಯದ ಮೊಹರಿನೊಡನೆ ನೀಡಿದೆ.

ಪಿ.ಆರ್. 637 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್ ಫೆಂಟ್ರಿ ರಸ್ತೆ, ಬೆಂಗಳೂರು ನಗರ,**
**ಅಧಿಸೂಚನೆ ಸಂಖ್ಯೆ:3/ಸಂವಿ/ಸಿ.ಓ.ಪಿ./2005 ದಿನಾಂಕ: 19ನೇ ಏಪ್ರಿಲ್ 2005**

ಬೆಂಗಳೂರು ನಗರ, ಶಿವಾಜಿನಗರ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ಸೆಂಟ್ರಲ್ ಸ್ಟ್ರೀಟ್, ಇನ್‌ಫೆಂಟ್ರಿ ರಸ್ತೆ, ವೆಂಕಟಸ್ವಾಮಿ ನಾಯ್ಡು ರಸ್ತೆ, ಮೇಯ್ನ್ ಗಾರ್ಡ್ ಕ್ರಾಸ್ ರಸ್ತೆಗಳಲ್ಲಿ ಬಿ.ಎಂ.ಟಿ.ಸಿ. ಬಸ್ಸುಗಳು ಸೇರಿದಂತೆ ವಾಹನಗಳ ಸಂಚಾರ ಒತ್ತಡ ಅಧಿಕಗೊಂಡು ಸಂಚಾರ ಸ್ಥಗಿತಗೊಳ್ಳುವುದಲ್ಲದೆ ರಸ್ತೆ ಅಪಘಾತಗಳಿಗೂ ಕಾರಣವಾಗಿದ್ದರಿಂದ ಈ ರಸ್ತೆಗಳಲ್ಲಿನ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಇತರೆ ಸಂಚಾರ ನಿರ್ಬಂಧನೆಗಳನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ವಿಧಿಸಿದ್ದೇನೆ.

1. ಬಾಳೆಕುಂದ್ರಿ ವೃತ್ತದಿಂದ ವೆಂಕಟಸ್ವಾಮಿ ನಾಯ್ಡು ರಸ್ತೆ ಮೂಲಕ ಶಿವಾಜಿನಗರ ಬಸ್ ನಿಲ್ದಾಣಕ್ಕೆ ಬಿ.ಎಂ.ಟಿ.ಸಿ. ಬಸ್ಸುಗಳ ಪ್ರವೇಶವನ್ನು ನಿಷೇಧಿಸಲಾಗಿದೆ. ಈ ಬಸ್ಸುಗಳು ಬಾಳೆಕುಂದ್ರಿ ವೃತ್ತದಿಂದ ಕ್ವೀನ್ಸ್ ರಸ್ತೆ ಮೂಲಕ ಬಂದು ಹೆಡ್‌ಕ್ವಾರ್ಟರ್ ಟ್ರಾಫಿಕ್ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಇನ್‌ಫೆಂಟ್ರಿ ರಸ್ತೆಯಲ್ಲಿ ಸಂಚರಿಸಿ ಸೆಂಟ್ರಲ್ ಸ್ಟ್ರೀಟ್ ಬಾಲಾಜಿ ಪ್ಲೇವುಡ್ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಸೆಂಟ್ರಲ್ ಸ್ಟ್ರೀಟ್ ಮೂಲಕ ಶಿವಾಜಿನಗರ ಬಸ್ ನಿಲ್ದಾಣಕ್ಕೆ ಪ್ರವೇಶಿಸಲು ಅವಕಾಶ ಕಲ್ಪಿಸಿದೆ.
2. ಕೆ.ಆರ್. ರಸ್ತೆ-ಕಬ್ಬನ್ ರಸ್ತೆ ಜಂಕ್ಷನ್ ಕಡೆಯಿಂದ ಕಬ್ಬನ್ ರಸ್ತೆಯಲ್ಲಿ ಬಂದು ಮೈನ್ ಗಾರ್ಡ್ ಕ್ರಾಸ್ ರಸ್ತೆಗೆ ಬಲಕ್ಕೆ ತಿರುವು ಪಡೆದುಕೊಳ್ಳುತ್ತಿದ್ದ ಬಿ.ಎಂ.ಟಿ.ಸಿ ಬಸ್ಸುಗಳನ್ನು ಬಲ ತಿರುವು ತೆಗೆದುಕೊಳ್ಳದಂತೆ ನಿಷೇಧಿಸಲಾಗಿದೆ. ಈ ಬಸ್ಸುಗಳು ಕಬ್ಬನ್ ರಸ್ತೆಯಲ್ಲಿ ಮುಂದೆ ಸಾಗಿ ಬಿ.ಆರ್.ವಿ. ಸಿಗ್ನಲ್‌ನಲ್ಲಿ ಬಲ ತಿರುವು ಪಡೆದು ಸೆಂಟ್ರಲ್ ಸ್ಟ್ರೀಟ್ ಮುಖಾಂತರ ಶಿವಾಜಿನಗರ ಬಸ್ ನಿಲ್ದಾಣಕ್ಕೆ ಸೇರಲು ಅವಕಾಶ ಕಲ್ಪಿಸಿದೆ. ಅನಿಲ್‌ಕುಂಬ್ಳೆ ವೃತ್ತದಿಂದ ಶಿವಾಜಿನಗರ ಬಸ್ ನಿಲ್ದಾಣಕ್ಕೆ ಬರುವ ಬಿ.ಎಂ.ಟಿ.ಸಿ. ಬಸ್ಸುಗಳು ಯಥಾಸ್ಥಿತಿಯಲ್ಲಿ ಸೆಂಟ್ರಲ್ ಸ್ಟ್ರೀಟ್ ಮುಖಾಂತರ ಶಿವಾಜಿನಗರ ಬಸ್ ನಿಲ್ದಾಣ ತಲುಪಬಹುದು.
3. ಸೆಂಟ್ರಲ್ ಸ್ಟ್ರೀಟ್ ಸೆಂಟ್ರಲ್ ಸ್ಟ್ರೀಟ್‌ನಲ್ಲಿ ಹಾಲಿ ಸೆಲೆಕ್ಟ್ ಹೋಟೆಲ್ ಜಂಕ್ಷನ್‌ನಿಂದ ಬಿ.ಆರ್.ವಿ. ಜಂಕ್ಷನ್ ವರೆಗೆ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ವ್ಯವಸ್ಥೆಯಲ್ಲಿ ಬಿ.ಆರ್.ವಿ. ಜಂಕ್ಷನ್‌ನಿಂದ ಸೆಲೆಕ್ಟ್ ಹೋಟೆಲ್ ಜಂಕ್ಷನ್ ಕಡೆಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಸೆಲೆಕ್ಟ್ ಹೋಟೆಲ್ ಜಂಕ್ಷನ್‌ನಿಂದ ಬಿ.ಆರ್.ವಿ. ಜಂಕ್ಷನ್ ಕಡೆಗೆ ಸಂಚರಿಸುವ ಸಂಚಾರವನ್ನು ನಿಷೇಧಿಸಲಾಗಿದೆ.
4. ಸೆಂಟ್ರಲ್ ಸ್ಟ್ರೀಟ್‌ನಲ್ಲಿ ಬಿ.ಆರ್.ವಿ. ಜಂಕ್ಷನ್‌ನಿಂದ ಸೆಲೆಕ್ಟ್ ವೃತ್ತದವರೆಗೆ ರಸ್ತೆಯ ಎರಡೂ ಬದಿಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.
5. **ಇನ್‌ಫೆಂಟ್ರಿ ರಸ್ತೆ:-** ಇನ್‌ಫೆಂಟ್ರಿ ರಸ್ತೆಯಲ್ಲಿ ಹಾಲಿ ಸಫೀನಾ ಪ್ಲಾಜಾ-ಮೈನ್‌ಗಾರ್ಡ್ ಜಂಕ್ಷನ್‌ನಿಂದ ಇನ್‌ಫೆಂಟ್ರಿ ರಸ್ತೆ-ಪ್ಲೇನ್ ಸ್ಟ್ರೀಟ್ ಜಂಕ್ಷನ್‌ವರೆಗೆ ಏಕ ಮುಖ ಸಂಚಾರವಿದ್ದು ಈ ಏಕಮುಖ ಸಂಚಾರವನ್ನು ಪ್ಲೇನ್‌ಸ್ಟ್ರೀಟ್ ಜಂಕ್ಷನ್‌ನಿಂದ ಕ್ವೀನ್ ರಸ್ತೆ ಹೆಡ್‌ಕ್ವಾರ್ಟರ್ ಟ್ರಾಫಿಕ್ ಜಂಕ್ಷನ್‌ವರೆಗೆ ವಿಸ್ತರಿಸಿದೆ. ಅಂದರೆ ಇನ್‌ಫೆಂಟ್ರಿ ರಸ್ತೆಯಲ್ಲಿ ಕ್ವೀನ್ಸ್ ರಸ್ತೆ ಹೆಡ್‌ಕ್ವಾರ್ಟರ್ ಟ್ರಾಫಿಕ್ ಜಂಕ್ಷನ್‌ನಿಂದ ಸಫೀನಾ ಪ್ಲಾಜಾ-ಮೈನ್‌ಗಾರ್ಡ್ ಜಂಕ್ಷನ್‌ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ವಾಹನ ಸಂಚಾರಕ್ಕೆ ಅವಕಾಶ ಮಾಡಿಕೊಟ್ಟು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಸಫೀನಾ ಪ್ಲಾಜಾ ಮೈನ್‌ಗಾರ್ಡ್ ಜಂಕ್ಷನ್‌ನಿಂದ ಕ್ವೀನ್ಸ್ ರಸ್ತೆ ಹೆಡ್‌ಕ್ವಾರ್ಟರ್ ಟ್ರಾಫಿಕ್ ಜಂಕ್ಷನ್ ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಸಂಚಾರವನ್ನು ನಿಷೇಧಿಸಲಾಗಿದೆ. ಹಾಗೂ ಇನ್‌ಫೆಂಟ್ರಿ ರಸ್ತೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ಆಂಗ್ಯುಲರ್ ಪಾರ್ಕಿಂಗ್ ಅನ್ನು ನಿಷೇಧಿಸಿ ಪ್ಯಾರೆಲರ್ ಪಾರ್ಕಿಂಗ್‌ಗೆ ಅವಕಾಶ ಮಾಡಿಕೊಡಲಾಗಿದೆ.
6. **ಪಾರ್ಕ್ ರಸ್ತೆ:** ಶಿವಾಜಿ ರಸ್ತೆ-ಪಾರ್ಕ್ ರಸ್ತೆ ಜಂಕ್ಷನ್‌ನಿಂದ ಪ್ಲೇನ್ ಸ್ಟ್ರೀಟ್ ಮತ್ತು ಹಾಸ್ಪಿಟಲ್ ರಸ್ತೆ ಜಂಕ್ಷನ್ ವರೆಗೆ (ಹರ್ಷ ಹೋಟೆಲ್ ಹಿಂಭಾಗ) ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ವ್ಯವಸ್ಥೆಯಲ್ಲಿ ಪ್ಲೇನ್ ಸ್ಟ್ರೀಟ್ ಮತ್ತು ಹಾಸ್ಪಿಟಲ್ ರಸ್ತೆ ಜಂಕ್ಷನ್‌ನಿಂದ ಶಿವಾಜಿರಸ್ತೆ-ಪಾರ್ಕ್ ರಸ್ತೆ ಜಂಕ್ಷನ್‌ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಶಿವಾಜಿ ರಸ್ತೆ-ಪಾರ್ಕ್ ರಸ್ತೆ ಜಂಕ್ಷನ್‌ನಿಂದ ಪ್ಲೇನ್ ಸ್ಟ್ರೀಟ್ ಮತ್ತು ಹಾಸ್ಪಿಟಲ್ ರಸ್ತೆ ಜಂಕ್ಷನ್ ವರೆಗಿನ ಸಂಚಾರವನ್ನು ನಿಷೇಧಿಸಿದೆ.
7. **ಬ್ಲ್ಯೂ ಕ್ರಾಸ್ ಚೇಂಬರ್ಸ್ ರಸ್ತೆ:** ಇನ್‌ಫೆಂಟ್ರಿ ರಸ್ತೆ ಮತ್ತು ಹಾಸ್ಪಿಟಲ್ ರಸ್ತೆ ನಡುವೆ ಬ್ಲ್ಯೂ ಕ್ರಾಸ್ ಚೇಂಬರ್ಸ್ ರಸ್ತೆಯಲ್ಲಿ ಹಾಲಿ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ವ್ಯವಸ್ಥೆಯಲ್ಲಿ ಹಾಸ್ಪಿಟಲ್ ರಸ್ತೆಯಿಂದ ಬ್ಲ್ಯೂ ಕ್ರಾಸ್ ಚೇಂಬರ್ಸ್ ರಸ್ತೆ ಮೂಲಕ ಇನ್‌ಫೆಂಟ್ರಿ ರಸ್ತೆ ಕಡೆಗೆ ಉತ್ತರದಿಂದ ದಕ್ಷಿಣ ದಿಕ್ಕಿನ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಇನ್‌ಫೆಂಟ್ರಿ ರಸ್ತೆಯಿಂದ ಹಾಸ್ಪಿಟಲ್ ರಸ್ತೆ ಕಡೆಗೆ ದಕ್ಷಿಣದಿಂದ ಉತ್ತರ ದಿಕ್ಕಿನ ಸಂಚಾರವನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳನ್ನು ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:27.4.2005 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:19.4.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 638 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಇವರ ನಡವಳಿಕೆಗಳು**

**ವಿಷಯ:** ಶ್ರೀ ಸಿ. ನರೇಶ್ ಬಿನ್ ಚಲುವೇಗೌಡ, ಮಾಲೀಕರು, ಲಿಬರ್ಟಿ ಲಿಕ್ಕರ್ಸ್, ಎಂ.ಸಿ. ರಸ್ತೆ, ಮಂಡ್ಯ ನಗರ, ಸಿ.ಇ.ಪಿ. ನಂ.1/1998-99, ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ:** ಮಾರಾಟಾಧಿಕಾರಿ, ಮಂಡ್ಯ ಶಾಖೆ ಇವರ ಪತ್ರ ದಿನಾಂಕ 15.2.2005.

**ಪ್ರಸ್ತಾವನೆ:**

ಶ್ರೀ ಸಿ. ನರೇಶ್ ಬಿನ್ ಚಲುವೇಗೌಡ, ಮಾಲೀಕರು, ಲಿಬರ್ಟಿ ಲಿಕ್ಕರ್ಸ್, ಎಂ.ಸಿ. ರಸ್ತೆ, ಮಂಡ್ಯ ನಗರ, ಮಂಡ್ಯ ಜಿಲ್ಲೆ, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಮಂಡ್ಯ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ 27.12.1997 ರಂದು ಅವಾರ್ಡ್ ನಂ.ಆರ್.ಸಿಎಸ್.ಡಿಡಿಎಸ್.ಡಿ7/3175/1996-97 ರೀತ್ಯ ಡಿಕ್ರಿ ಪಡೆದಿರುತ್ತಾರೆ. ಡಿಕ್ರಿಯಾದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಅಮಲ್ಜಾರಿ ಆದೇಶ ಸಂಖ್ಯೆ: ಸಿ.ಇ.ಪಿ. ನಂ.1/1998-99 ರಂತೆ ಪಡೆದು ಅಮಲ್ಜಾರಿ ಕಡತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳಡಿಯಲ್ಲಿ ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಆದೇಶದಡಿಯಲ್ಲಿ ತಿಳಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ 12.1.2005 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ಕೆ.ಎಸ್. ರಾಜಣ್ಣ, ಬಿನ್ ಸಿದ್ದೇಗೌಡ, ನಂ.1156, 1ನೇ ಕ್ರಾಸ್, ಅಶೋಕನಗರ, ಮಂಡ್ಯ, ಮಂಡ್ಯ ಜಿಲ್ಲೆ, ಇವರು ಅತಿ ಹೆಚ್ಚಿನ ಮೊತ್ತ ರೂ.1,41,000/-ಕ್ಕೆ (ಒಂದು ಲಕ್ಷದ ನಲವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ಮಂಡ್ಯ ಶಾಖೆ ಬಿಡ್‌ನ್ನು ಶ್ರೀ ಕೆ.ಎಸ್. ರಾಜಣ್ಣ, ಬಿನ್ ಸಿದ್ದೇಗೌಡ, ನಂ.1156, 1ನೇ ಕ್ರಾಸ್, ಅಶೋಕನಗರ, ಮಂಡ್ಯ ರವರ ಹೆಸರಿಗೆ ನಿಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರನ್ವಯ ನಿಯಮ 38(2)(ಡಿ)ರ ಪ್ರಕಾರ ಕ್ರಮ ಜರುಗಿಸಲಾಗಿದ್ದು ನಿಯಮ 38(6)(ಎ) ಅನ್ವಯ ಕ್ರಮ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸನಿವ/ಯಾ.ಸ್ಥಿರೀಕರಣ/590/04-05, ದಿನಾಂಕ: 21ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀ ನರೇಶ್ ಬಿನ್ ಚಲುವೇಗೌಡ, ಮಾಲೀಕರು, ಲಿಬರ್ಟಿ ಲಿಕ್ಕರ್ಸ್, ಎಂ.ಸಿ. ರಸ್ತೆ, ಮಂಡ್ಯ, ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ 12.1.2005ರ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮೊತ್ತ ರೂ.1,41,000/-ಕ್ಕೆ (ಒಂದು ಲಕ್ಷದ ನಲವತ್ತೊಂದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ಬಿಡ್ ಮಾಡಿದ್ದ ಶ್ರೀ ಕೆ.ಎಸ್. ರಾಜಣ್ಣ, ಬಿನ್ ಸಿದ್ದೇಗೌಡ, ನಂ.1156, 1ನೇ ಕ್ರಾಸ್, ಅಶೋಕನಗರ, ಮಂಡ್ಯ, ಮಂಡ್ಯ ಜಿಲ್ಲೆ ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಮಂಡ್ಯ ನಗರ, ಹಾಲಹಳ್ಳಿ ಬಡಾವಣೆಗೆ ಸೇರಿ ಹೊಸ ಹಳ್ಳಿಯಲ್ಲಿರುವ ಖಾತೆ ಹಳೇ ನಂಬರ್ ಡಿ5/1078/220, ಹೊಸ ನಂ.ಡಿ5/1161/220 ಪೂರ್ವ ಪಶ್ಚಿಮ 35 ಅಡಿಗಳು, ಉತ್ತರ ದಕ್ಷಿಣ 65 ಅಡಿಗಳ ಅಳತೆಯುಳ್ಳ ಖಾಲಿ ನಿವೇಶನ ಇದಕ್ಕೆ ಚೆಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ನಾತಿ ಬೋರಯ್ಯನವರ ಜಮೀನು |
| ಪಶ್ಚಿಮಕ್ಕೆ | : | ಶ್ರೀಮತಿ ಎನ್. ಜಯಲಕ್ಷ್ಮಮ್ಮನವರ ಸೈಟು |
| ಉತ್ತರಕ್ಕೆ | : | ತಿರುಗಾಡುವ ರಸ್ತೆ |
| ದಕ್ಷಿಣಕ್ಕೆ | : | ಗೋದಗೆಂಪನ ನಿಂಗೇಗೌಡರ ಮಗ ಮಂಚೇಗೌಡ (ಮಂಚು)ರವರ ಜಮೀನು |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 21.3.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

ಪಿ.ಆರ್. 639

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು - 560 018**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಸ್:13011:2004-05, ದಿನಾಂಕ: 1ನೇ ಫೆಬ್ರವರಿ 2005**

**ವಾದಿ**

ಆಡಳಿತಾಧಿಕಾರಿ,
ಕಾವೇರಿ ಅರ್ಬನ್ ಕೋ-ಅಪರೇಟಿವ್ ಬ್ಯಾಂಕ್ ನಿಯಮಿತ,
ನಂ.1259/691, 13ನೇ ಅಡ್ಡರಸ್ತೆ, 2ನೇ ಹಂತ,
ಗಿರಿನಗರ, ಬೆಂಗಳೂರು-560 085

**ಪ್ರತಿವಾದಿಗಳು**

1. ಶ್ರೀ ಹೆಚ್.ಎಂ. ರಾಮಯ್ಯ, ಬಿನ್ ಮುನಿಸ್ವಾಮಿ ನಾಯ್ಕ,
ನಂ.1259/691, 13ನೇ ಕ್ರಾಸ್, 2ನೇ ಹಂತ, ಗಿರಿನಗರ,
ಬೆಂಗಳೂರು-560 085.

2. ಶ್ರೀಮತಿ ನಾಗರತ್ನಮ್ಮ ಕೋಂ ಹೆಚ್.ಎಂ. ರಾಮಯ್ಯ,
ನಂ.1259/691, 13ನೇ ಅಡ್ಡರಸ್ತೆ, 2ನೇ ಹಂತ,
ಗಿರಿನಗರ, ಬೆಂಗಳೂರು-560 085.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.5,49,956-00 ಗಳನ್ನು ದಿನಾಂಕ 1-2-2004 ರಿಂದ ಸಂಪೂರ್ಣ ತೀರುವಳಿಯಾಗುವವರೆಗೆ ಶೇಕಡಾ 20.5 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ:ಡಿಸ್:13011:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 2ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಸ್:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 2ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

2ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಚಿಸಿದಲ್ಲಿ ರೂ.5,49,956-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:18-3-2005 ರ ಒಳಗಾಗಿ ಅಧಿಕೃತ ಚಲನ್ / ರಶೀತಿಯ ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರ (ಬೆಂಗಳೂರು - 560 085) ಗಿರಿನಗರ 2ನೇ ಹಂತದ ಬಡಾವಣೆಯ 13ನೇ ಅಡ್ಡರಸ್ತೆಯಲ್ಲಿರುವ ನಿವೇಶನ ಸಂಖ್ಯೆ.1259/691 ಅಳತೆ ಪೂರ್ವದಿಂದ ಪಶ್ಚಿಮಕ್ಕೆ 60 ಅಡಿ, ಉತ್ತರದಿಂದ ದಕ್ಷಿಣಕ್ಕೆ 40 ಅಡಿ ಅಳತೆಯ ನಿವೇಶನ ಮತ್ತು ಇದರಲ್ಲಿ ಕಟ್ಟಿರುವ ವ್ಯಾಪಾರ ಮಳಿಗೆ ಹಾಗೂ ವಾಸದ ಮನೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ನಿವೇಶನ ಸಂಖ್ಯೆ. 1220
ಉತ್ತರಕ್ಕೆ : ನಿವೇಶನ ಸಂಖ್ಯೆ. 1260
ದಕ್ಷಿಣಕ್ಕೆ : ನಿವೇಶನ ಸಂಖ್ಯೆ. 1250

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 1-2-2005 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 642 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ACER TECHNOLOGY VENTURES ADVISORY (INDIA) PRIVATE LIMITED**

**NOTICE**

Notice is hereby given that pursuant to section 484 of the Companies Act 1956 and the applicable provisions, if any, of the Companies Act 1956, that an Extra Ordinary General Meeting of the shareholders of the company, will be held at the Registered office of the Company at 003, Salapuria Cambridge Residency, Cambridge Road, Ulsoor, Bangalore - 560 008, on 9th May 2005 at 10.00 a.m. to resolve to wind up the company as "members voluntary winding up" and to appoint Mr. P.K. Narendra, Partner, P.K. Narendra & Co, Chartered Accountants, 15, Basappa Road, Shanthi Nagar, Bangalore 560 027 as the liquidator for the company.

Date: 27th April 2004.

P.D. 31 Liquidator

## ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ

### ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರ ಕಛೇರಿ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29

### ಅಧಿಸೂಚನೆ

**ಸಂಖ್ಯೆ: ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಮಿಸ್ಸಿ/ಸಿಆರ್–27/04-05, ದಿನಾಂಕ: 08ನೇ ಏಪ್ರಿಲ್ 2005**

**ವಿಷಯ:** ಇಲಾಖೆಯು 2005ನೇ ಸಾಲಿನ ಫೆಬ್ರವರಿ ಮತ್ತು ಮಾರ್ಚ್ ತಿಂಗಳಿನಲ್ಲಿ ನಡೆಸಿದ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಕಾಇ 50 ಕಾಬಾಸೇ 2002, ದಿ: 11-09-02.

2. ಈ ಕಛೇರಿಯ ಪತ್ರ ಸಂಖ್ಯೆ. ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಮಿಸ್ಸಿ/ಸಿಆರ್–27/04-05, ದಿನಾಂಕ:06-09-2004.

ಉಲ್ಲೇಖದಲ್ಲಿ ಸೂಚಿಸಿರುವ ಸರ್ಕಾರದ ಅಧಿಸೂಚನೆಯಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆ ಮಂಡಳಿಯನ್ನು ರಚಿಸಲಾಗಿದೆ. ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ 1959ರ ಅನ್ವಯ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ 2005ನೇ ಸಾಲಿನ ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಬೆಂಗಳೂರಿನಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯನ್ನು ನಡೆಸಲಾಗಿದೆ. ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಹೆಸರುಗಳನ್ನು ನಿಯಮ 40 ರಂತೆ ಗೆಜೆಟಿನಲ್ಲಿ ಪ್ರಕಟಿಸಬೇಕಾದ ಹಿನ್ನೆಲೆಯಲ್ಲಿ ಕೆಳಗೆ ಕಾಣಿಸಿದ ಅಭ್ಯರ್ಥಿಗಳು ತೇರ್ಗಡೆಯಾಗಿರುತ್ತಾರೆ ಎಂದು ಈ ಮೂಲಕ ಘೋಷಿಸಿದೆ.

| ಕ್ರಮ ಸಂಖ್ಯೆ | ನೊಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|---|
| 01 | 9 | **ಶ್ರೀ/ಶ್ರೀಮತಿ:**<br>ಅನಿಲ್ ಕುಮಾರ್ ಪಾಟೀಲ್, S/o. ಬಾಬು ರಾವ್ ಪಾಟೀಲ್, ಮನೆ ನಂ. 9–1–309, ನಂದಿ ಕಾಲೋನಿ, ಬೀದರ್–585 401 |
| 02 | 10 | ಅನಿಲ್ ಕುಮಾರ್ ಪಿ. ಆರ್. ಎಸ್, ಮೆ॥ ಗಣಪತಿ ಶುಗರ್ ಇಂಡಸ್ಟ್ರೀಸ್ ಲಿ, ಫಾಸಲ್ ವಾಡಿ (ವಿಲೇಜ್), ಸಂಗರೆಡ್ಡಿ, ಮೇಡಕ್ ಜಿಲ್ಲೆ, ಆಂಧ್ರ ಪ್ರದೇಶ–502 294 |
| 03 | 13 | ಅಶ್ವಿನಿ ರಂಗನಾಥ್ ಅಡವಿ, "ಅನುಗ್ರಹ", 6ನೇ ಕ್ರಾಸ್, ಪಟೇಲ್ ನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ. |
| 04 | 19 | ಬಸವರಾಜ್ ಎ ಯಶವಂತ್, ಮಜಲಟ್ಟಿ ಪೋಸ್ಟ್, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 05 | 21 | ಬಟ್ಟು ವೇಣುಗೋಪಾಲ ಕೃಷ್ಣ, ಮನೆ ನಂ. 4–4–35, ನೇತಾಜಿ ರಸ್ತೆ, ಜಹೀರ್ ಪುರ, ಕಮ್ಮಂ –507 003 |
| 06 | 23 | ಭೀಮ ಮುರುಳಿಕೃಷ್ಣ, ನಂ 16–990, ಶ್ರೀರಾಮನಗರ ಕಾಲೋನಿ, ಪಣಗಲ್ ಪೋಸ್ಟ್, ಶ್ರೀಕಾಲಾಸ್ತಿ, ಚಿತ್ತೂರು–517 640, ಆಂಧ್ರ ಪ್ರದೇಶ |
| 07 | 25 | ಬೊಡ್ಡು ನಾರಾಯಣ, ಮನೆ ನಂ 7–3–56, ಪಕಬೊಂಡಬಜಾರ್, ಕಮ್ಮಂ–507 001 |
| 08 | 27 | ಚಂದ್ರ ಸಂತೋಷ ಕುಮಾರ್ ಎನ್. ಎಸ್. ಎಫ್–12/6, ಎ.ಪಿ. ಪೇಪರ್ ಮಿಲ್ ಟೌನ್‌ಶಿಪ್, ಮಲ್ಯಪೇಟ, ರಾಜಮಂಡ್ರಿ, ಇ. ಜಿ. ಜಿಲ್ಲೆ, ಆಂಧ್ರ ಪ್ರದೇಶ |
| 09 | 36 | ಗಂಗಾ ಬಾಪಿ ರಾಜು, C/o. ಗೌತಮಿ ಬಯೋ–ಎನರ್ಜಿಸ್ ಪ್ರೈ ಲಿ, ಗೋಪಾಲಪುರಂ, ಕಮ್ಮಂ ಅರ್ಬನ್, ಮಂಡಲ್, ಕಮ್ಮಂ–507 002, ಆಂಧ್ರ ಪ್ರದೇಶ |
| 10 | 37 | ಗಣಪತ್‌ರಾವ್ ಬಿರಾದರ್, ಅ/ಠಿ. ಬಾಬುರಾವ್, ಮದಕಟ್ಟಿ, ನಂ. 8–2–105, ಶಹಗಾನಿ, ಬೀದರ್–585 401 |
| 11 | 40 | ಗೊಟ್ಟಿಕೊಂಡ ರವಿಚಂದರ್, S/o. ಜಿ. ನಾಗಭೂಷಣಂ, ಸತ್ಯ ಸಾಯಿ ಕಾಟನ್ ಮಿಲ್ ಎದುರು, ಪೆರೆಚೆಂಟ ಸೆಂಟರ್, ಮೆದಿಕೊಂಡೂರು (ಮಂಡಲ್), ಗುಂಟೂರ್ |
| 12 | 41 | ಗುನ್ನಂ ಈಶ್ವರ್ ರಾವ್, C/o. ಗೌತಮಿ ಬಯೋ–ಎನರ್ಜಿಸ್ ಪ್ರೈ ಲಿ, ಗೋಪಾಲಪುರಂ, ಕಮ್ಮಂ ಅರ್ಬನ್, ಮಂಡಲ್, ಕಮ್ಮಂ–507 002, ಆಂಧ್ರ ಪ್ರದೇಶ್ |
| 13 | 51 | ಕಲಾದಗಿ ವಿ. ಸಿ, ಸೋಮಯ್ಯ ಆರ್ಗಾನೊ ಕೆಮಿಕಲ್ಸ್, ಸಮೀರ್‌ವಾಡಿ – 587 316, ಮುಧೋಳ್ ತಾಲ್ಲೂಕು, ಬಾಗಲ್‌ಕೋಟೆ ಜಿಲ್ಲೆ. |
| 14 | 53 | ಕಂಡುಕುರಿ ಸುರೇಶ್, C/o. ಗಾಯತ್ರಿ ಫ್ಯಾನ್ಸಿ ಅಂಡ್ ಜನರಲ್ ಸ್ಟೋರ್ಸ್, ಬಂದರುಗುಂಡ, ಮನುಗುರು, ಕಮ್ಮಂ |
| 15 | 54 | ಕಣ್ಣ. ಎನ್, ಇ–405, ಶ್ರೀ ನಗರ, ಗೌರಿಬಿದನೂರ್, ಕೋಲಾರ್ ಜಿಲ್ಲೆ – 561 208, ಕರ್ನಾಟಕ |
| 16 | 57 | ಕಾರ್ತಿಕ್. ಪಿ, ದಿ ಸೌತ್ ಇಂಡಿಯಾ ಪೇಪರ್ ಮಿಲ್ಸ್ ಲಿ, ಚಿಕ್ಕಯ್ಯನ ಛತ್ರ, ಪಿ.ಓ. ನಂಜನಗೂಡು – 571 301. |
| 17 | 60 | ಕಿರಣ್ ಕುಮಾರ್. ಕೆ, ಮನೆ ನಂ. 35, ಡಬ್ಲ್ಯೂ/ನಂ. 19, ಕಲಾಸಿ ಸ್ಟ್ರೀಟ್, 2ನೇ ಗೇಟ್, ರೇಡಿಯೊ ಪಾರ್ಕ್, ಬಳ್ಳಾರಿ–583 102 |
| 18 | 71 | ಲಕ್ಷ್ಮೀಶ ಎಸ್. ಪಿ. ನಂ. ಎಂ.ಐ.ಜಿ. 541, 1ನೇ ಸ್ಟೇಜ್, ಶಾರದಾದೇವಿ ನಗರ, ಮೈಸೂರು –570 023 |
| 19 | 72 | ಲಿಂಗರಾಜ್ ಉಪ್ಪಿನ್, ಮೆ॥ ಧ್ಯಾನಯೋಗಿ ಶ್ರೀ. ಶಿವಕುಮಾರ್ ನಗರ, ಹಿರೇಬೇವನೂರ್, ಬಿಜಾಪುರ ಜಿಲ್ಲೆ. |
| 20 | 75 | ಮಹೇಶ್ವರ್ ರಾವ್ ಪಿ. ವಿ., S/o. ಪಿ. ನಾರಾಯಣ ರಾವ್, 57–4–5512, ದುರ್ಗಾ ನಗರ, ಕಾಂಚರಪಾಲೇಂ, ವಿಶಾಖಪಟ್ಟಣಂ |
| 21 | 77 | ಮಲ್ಲಿಕಾರ್ಜುನ್ ಎನ್, ಸಿ–18, ಡಿ.ಕೆ.ಎಸ್.ಎಸ್.ಕೆ ಲಿಮಿಟೆಡ್, ಫ್ಯಾಕ್ಟರಿ ಸೈಟ್, ಚಿಕ್ಕೋಡಿ, ಬೆಳಗಾಂ ಜಿಲ್ಲೆ. |

| ಕ್ರಮ ಸಂಖ್ಯೆ | ನೊಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|---|
| | | **ಶ್ರೀ/ಶ್ರೀಮತಿ:** |
| 22 | 78 | ಮಲ್ಲಿಕಾರ್ಜುನ ರಾಜು ಕೆ., ಹೆಚ್‌ಡಿ ಫಿನ್‌ಕಾನ್ಸ್ ಇನ್ಫೋ, C/o. ಚೆಟ್ಟಿನಾಡು ಸಿಮೆಂಟ್ ಕಾರ್ಪೋರೇಷನ್ ಲಿಮಿಟೆಡ್, ರಾಣಿಮೆಯ್ಯಾಮಿ ನಗರ, ಕರಿಕ್ಕಳಿ ಅಂಚೆ, ಗಾಜಿಲಿಯಮ್ಮರೈ (ವಿಲೇಜ್), ದಿಂಡಿಗಲ್ ಜಿಲ್ಲೆ–624 703 (ತಮಿಳುನಾಡು) |
| 23 | 82 | ಮೊಹಮದ್ ಕಲೀಲ್ ಊರ್ ರೆಹಮಾನ್, C/o. ಮುರುಳಿಧರ್, ಸತ್ಯಗಿರಿ ಕಾಂಪ್ಲೆಕ್ಸ್, ಎ.ಪಿ.ಎಂ.ಸಿ ರಸ್ತೆ, ಮಹಾಲಿಂಗಪುರ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 24 | 84 | ಮೊಗಲಪ್ಪು ರಾಮ ಕೃಷ್ಣ ಮೋಹನ್ ರಾಯ್, S/o. ವೆಂಕಟ ರಾವ್, ಮುರಮಂದ, ಕಡಿಯಂ ಮಂಡಲ್, ಪಶ್ಚಿಮ ಗೋದಾವರಿ ಜಿಲ್ಲೆ. ಆಂಧ್ರ ಪ್ರದೇಶ–533 126 |
| 25 | 87 | ನಾಗೇಂದ್ರ ಬಿ. ಎನ್., ಕಾರ್ಟ್ ಸ್ಟ್ರೀಟ್, ಬನ್ನೂರು ಟೌನ್, ಟಿ. ಎನ್. ಪುರ, ಮೈಸೂರು ಜಿಲ್ಲೆ–571 101 |
| 26 | 89 | ನೆಲ್ಲೂರ್ ವೆಂಕಟ ಬಾಲ ಸುಬ್ರಮಣ್ಯಂ, C/o. ಸನಪ್ಪ ಬಿಲ್ಡಿಂಗ್, ಕೌಡ್ಲೆ ರಸ್ತೆ, ಕೊಪ್ಪ ವಿಲೇಜ್, ಮದ್ದೂರ್ ತಾಲ್ಲೂಕು, ಮಂಡ್ಯ ಜಿಲ್ಲೆ–571 425 |
| 27 | 90 | ನೆಟ್ಟಲಂ ಕೃಷ್ಣಕುಮಾರ್ ಅಭಿನಂದ್, ಮನೆ ನಂ. 73/17, ಕೇಶವ ನಿಲಯ, ವೆಂಕಟೇಶ್ವರ ನಗರ, ೨ನೇ ಮೈನ್, ಪಟೇಲ್ ನಗರ, ಬಳ್ಳಾರಿ |
| 28 | 92 | ಪಾಲಾರ್ಥಿ ಆನಂದ್ ಕುಮಾರ್, ಕಾಕತೀಯ ಸಿಮೆಂಟ್ ಶುಗರ್ಸ್ ಅಂಡ್ ಇಂಡ. ಲಿ, ಪೇರುವಂಚ ವಿಲೇಜ್, ಕಲ್ಲೂರು ಮಂಡಲ್, ಕಮ್ಮಂ ಜಿಲ್ಲೆ – 507 209 |
| 29 | 93 | ಪಾಂಡಿಯನ್ ಎಂ., ನಂ. 14, ಮುನಿರಂಗಪ್ಪ ಕ್ವಾರ್ಟರ್ಸ್, 2ನೇ ಬ್ಲಾಕ್, 2ನೇ ಕ್ರಾಸ್, ಜಯನಗರ, ಬೆಂಗಳೂರು–560 011 |
| 30 | 94 | ಪರಚೂರು ವೆಂಕಟ ಅನಿಲ್ ಕುಮಾರ್, ಪ್ಲಾಟ್ ನಂ. 110, ಬ್ಲಾಕ್–1, ಸಿಬಿಆರ್ ಎಸ್ಟೇಟ್. ದೀಪ್ತಿ ಶ್ರೀನಗರ, ಚಂದ ನಗರ (ಅಂಚೆ), ಹೈದರಾಬಾದ್. |
| 31 | 99 | ಪ್ರಭಾಕರ್ ವಿ., ಆರ್.ಕೆ. ಪವರ್‌ಜೆನ್ ಪ್ರೈ. ಲಿ, ೫ನೇ ಕಿ.ಮೀ., ಚಲ್ಲಾಕೆರೆ ರಸ್ತೆ, ಹಿರಿಯೂರ್–572 144, ಚಿತ್ರದುರ್ಗ ಜಿಲ್ಲೆ. |
| 32 | 101 | ಪ್ರಫುಲ್ಲ ಚಂದ್ರ ಬೆಹರ, C/o. ಬಿ.ಸಿ. ಹರಕುದೆ, ಮನೆ. ನಂ. 19–1–196, ಸಂದೀಪ್ ಬಿಲ್ಡಿಂಗ್, ಶಿವನಗರ (ದಕ್ಷಿಣ), ಬೀದರ್–585 401 |
| 33 | 106 | ಪ್ರಸಾದ್ ಚವರೆ, ಪಿ.ಬಿ ನಂ ೯, ಜಿಂದಾಲ್ ಥರ್ಮಲ್ ಪವರ್ ಕಂಪನಿ ಲಿಮಿಟೆಡ್, ತೋರಣಗಲ್ಲು (ಅಂಚೆ), ಬಳ್ಳಾರಿ ಜಿಲ್ಲೆ. |
| 34 | 112 | ರಾಘವೇಂದ್ರ ಚಾರಿ ಕೆ. ಎಸ್. S/o. ಕೆ. ಶಿವರಾಂ, 54 ಎ/೧, ಎಸ್. ಎಸ್. ಮಂಜಿ ಮೆಸ್ ರಸ್ತೆ, ಕಂಟೋನ್‌ಮೆಂಟ್, ಬಳ್ಳಾರಿ–583 104 |
| 35 | 119 | ರಾಜೇಶ್ ಕುಮಾರ್ ಆರ್., ಮನೆ ನಂ. 8–6–78, 2ನೇ ಮಹಡಿ, ಡಾ॥ ಸರಗೇಶ್ವರ ರಾವ್ ಬಿಲ್ಡಿಂಗ್. ಓಲ್ಡ್ ಪಿ.ಓ ರಸ್ತೆ, ಸತ್ತೆನಪಳ್ಳಿ–52 2403, ಗುಂಟೂರ್ ಜಿಲ್ಲೆ, ಆಂಧ್ರ ಪ್ರದೇಶ |
| 36 | 122 | ರಜನೀಶ್ ಸೇತಿಯ, ಜಿಂದಾಲ್ ಸ್ಟೀಲ್ ಅಂಡ್ ಪವರ್ ಲಿ, ಪಿ.ಬಿ. ನಂ 16, ಕಾರ್ಸಿಯ ರಸ್ತೆ, ರಾಯಗರ್–496 001 |
| 37 | 138 | ಸಕಾಮುರಿ ವಿಜಯಕುಮಾರ್, ಕೊಥಪಲೇಮ್ ವಿಲೇಜ್, ಬಟ್ಟೆಪಾಡು ಪೋಸ್ಟ್, ಆತ್ಮಕೂರ್ (ಮಂಡಲ್), ನೆಲ್ಲೂರ್–524 322, ಆಂಧ್ರ ಪ್ರದೇಶ |
| 38 | 141 | ಸಂಜೀವ್ ಬಿ. ದಲ್ವಾಯಿ, ಅಂಚೆ: ದಾರೂರ್ – 591 261, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 39 | 143 | ಸಂತೋಷ್ ರಾಘವೇಂದ್ರ ಮುತ್ತಾಲಿಕ್‌ದೇಸಾಯಿ, ಪ್ಲಾಟ್ ನಂ. 1756, ಸೆಕ್ಟರ್ ನಂ. 10, ಆಂಜನೇಯನಗರ, ಮಲ್–ಮಾರುತಿ ಎಕ್ಸೆಟೆನ್‌ಶನ್, ನಿರವಾನಿ ಕಾರ್ಪೋರೇಟರ್ ಎದುರು, ಬೆಳಗಾಂ |
| 40 | 144 | ಶಶಿಧರನ್ ಎಸ್., ಆರ್. ಕೆ. ಪವರ್‌ಜೆನ್ ಪ್ರೈವೇಟ್ ಲಿಮಿಟೆಡ್, 5ನೇ ಕಿ.ಮಿ, ಚಲ್ಲಕೆರೆ ರಸ್ತೆ, ಹಿರಿಯೂರು–572 144, ಚಿತ್ರದುರ್ಗ ಜಿಲ್ಲೆ. |
| 41 | 150 | ಸತ್ಯನಾರಾಯಣ ಎಂ. ಎನ್. ವಿ., ಮೆ॥ ಗಣಪತಿ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್, ಫಜಲ್ ವಾಡಿ (ವಿಲೇಜ್), ಸಂಗರೆಡ್ಡಿ, ಮೇಡಕ್ ಜಿಲ್ಲೆ – 502 294, ಆಂಧ್ರ ಪ್ರದೇಶ |
| 42 | 151 | ಸತ್ಯನಾರಾಯಣ ಡಿ. ವಿ., S/o. ಡಿ. ಆರ್. ಕೆ. ಸಾಯಿಬಾಬಾ. ರೈಲ್ವೆ ಎ. ನಂ. 56/5(ಟೈಪ್–೧), ಬಾಲಸಂಗಮ್ ಸ್ಟ್ರೀಟ್, ಕಾಟಿಪೇಟ್, ವಾರಂಗಲ್ ಜಿಲ್ಲೆ, ಆಂಧ್ರ ಪ್ರದೇಶ |
| 43 | 153 | ಶೇಕ್ ಮೊಹಮ್ಮದ್ ರಫಿ, ಕ್ಯೂ. ನಂ. ಎಫ್–12, ನೆಲ್ಲೂರು ಥರ್ಮಲ್ ಸ್ಟೇಷನ್, ಕೊವ್ವುರ್–524 137, ನೆಲ್ಲೂರು ಜಿಲ್ಲೆ, ಆಂಧ್ರ ಪ್ರದೇಶ |
| 44 | 155 | ಶೇಖರ್ ಸಿಂಗಿ, 6, ಹಳೆಯ ಶಾಪಿಂಗ್ ಸೆಂಟರ್, ಬನಗೂರ್ ಮಗರ್, ದಾಂಡೇಲಿ |
| 45 | 158 | ಶಿವಶಂಕರ್ ಹೆಚ್. ಎಸ್. ನಂ. ಇ–3/ ಶುಗರ್ ಟೌನ್, ಮಂಡ್ಯ ತಾಲ್ಲೂಕು |

| ಕ್ರಮ ಸಂಖ್ಯೆ | ನೊಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|---|
| 46 | 159 | **ಶ್ರೀ/ಶ್ರೀಮತಿ:** ಶ್ರೀಹರಿ ಅನಿಲ್ ಖಾಡಿಲ್‌ಕರ್, ಮೆ॥ ಗೋದಾವರಿ ಶುಗರ್ ಮಿಲ್ಸ್ ಲಿ, ಸಮೀರ್‌ವಾಡಿ, ಮುಧೋಳ್ ತಾಲ್ಲೂಕು, ಕರ್ನಾಟಕ |
| 47 | 160 | ಸಿದ್ಧಗೊಂಡ ಕಲಗೊಂಡ್, ಮೆ॥ ಗೋದಾವರಿ ಶುಗರ್ ಮಿಲ್ಸ್ ಲಿ, ಸಮೀರ್‌ವಾಡಿ, ಮುಧೋಳ್ ತಾಲ್ಲೂಕು, ಬಾಗಲ್‌ಕೋಟೆ ಜಿಲ್ಲೆ. |
| 48 | 164 | ಸಿಂಗಿ ಶಟ್ಟಿ ಗುರುನಾದ ರಾವ್, ಕ್ವಾ. ನಂ. 177 ಡಿ, ಸೆಕ್ಟರ್–1, ಉಕ್ಕುನಗರಂ, ವಿಶಾಖಪಟ್ಟಣಂ, ಆಂಧ್ರ ಪ್ರದೇಶ |
| 49 | 166 | ಶಿವ ಶಂಕರ್ ವಿ., ಸಾಗರ್ ಶುಗರ್ ಅಂಡ್ ಅಲಾಯ್ಡ್ ಪ್ರಾಡಕ್ಟ್ಸ್ ಲಿ, ನೆಲ್ವಾಯಿ, ಶ್ರೀ ರಂಗರಾಜಪುರಂ, ಮಂಡಲ್, ಚಿತ್ತೂರ್–517 167 |
| 50 | 167 | ಸೋಮೇಶ್ವರ್ ಪ್ರಸಾದ್ ಕೆ. ಎಂ., S/o. ಕೆ. ಎಂ. ಜಾಂಬಯ್ಯ, ಪ್ಲಾಟ್ ನಂ. 70, ವಿಷ್ಣು ನಿಲಯ, ಕೆ. ರಾಮಯ್ಯ ಕಾಲೋನಿ, ಪಟೇಲ್ ನಗರ ಎಕ್ಸ್‌ಟೆನ್‌ಶನ್, ಬಳ್ಳಾರಿ–583 101 |
| 51 | 168 | ಶ್ರೀಕಾಂತ್ ಭಾನು. ಪಿ. ಎನ್. ಡಿಎಸ್‌ಸಿಎಲ್, ಕುಕ್ಕುವಾಡ–577 525, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ. |
| 52 | 169 | ಶ್ರೀನಿವಾಸ್ ಬಿ. ನಲ್ವರ್, C/o. ಡಾ॥ ಆರ್. ಬಿ. ನಲ್ವರ್, ಟೈಪ್ ಎ/2, ಇಎಸ್‌ಐ ಆಸ್ಪತ್ರೆ ಕ್ವಾರ್ಟರ್ಸ್, ಆಶೋಕನಗರ, ಬೆಳಗಾಂ–590 016 |
| 53 | 171 | ಶ್ರೀನಿವಾಸ್ ಸಿಂಹಾದ್ರಿ, ಜಿ–33, ವ್ಯಂತಾಯ್ ಅಪಾರ್ಟ್‌ಮೆಂಟ್ಸ್–11, ಶ್ಯಾಮಲನಗರ, ರಾಜಮಂಡ್ರಿ, ಪೂರ್ವ ಗೋದಾವರಿ , ಆಂಧ್ರ ಪ್ರದೇಶ–533 105 |
| 54 | 172 | ಶ್ರೀನಿವಾಸ್ ರಾವ್ ಎಸ್., ಪೇರಾಲ, ಚಿರಾಲ–523 157, ಪ್ರಕಾಶಂ ಜಿಲ್ಲೆ, ಆಂಧ್ರ ಪ್ರದೇಶ |
| 55 | 173 | ಶ್ರೀನಿವಾಸರಾವ್ ಚೊಪ್ಪವರಪ್ಪು, S/o. ಸಿ. ಹೆಚ್. ರಾಮಸ್ವಾಮಿ, ಮನೆ ನಂ. 4–11–14, ಶಾರದಾ ಸ್ಟ್ರೀಟ್, ಎ. ಸಿ. ಗಾರ್ಡನ್ಸ್, ರಾಜಮಂಡ್ರಿ–533 101, ಆಂಧ್ರ ಪ್ರದೇಶ |
| 56 | 174 | ಸುಭಾಷಚಂದ್ರ, C/o. ಸಂಗಪ್ಪ ಮಟಗರ್, ಎಸಿಸಿ ಸಿಮೆಂಟ್ ಡೀಲರ್, ಎಪಿಎಂಸಿ ರಸ್ತೆ, ಮಹಾಲಿಂಗಪುರ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ |
| 57 | 177 | ಸುಧೀರ್ ರಾಘವೇಂದ್ರ ರಾವ್ ಕುಲಕರ್ಣಿ, C/o. ಎಸ್. ಬಿ. ದೇಶಪಾಂಡೆ, ಬೆಳಗಲಿ ಹತ್ತಿರ, ವಿದ್ಯಾನಗರ, ಮುಧೋಳ್ ರಸ್ತೆ, ಮಹಾಲಿಂಗಪುರ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ |
| 58 | 181 | ಸುನೀಲಕುಮಾರ್ ಬೆನಕಟ್ಟಿ, ಜಿ.ಎಸ್.ಎಂ. ಲಿಮಿಟೆಡ್, ಸಮೀರವಾಡಿ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ |
| 59 | 182 | ಸೂರಿಬಾಬು ಕಟ್ಟಡ, ಜಿ.ಎಸ್.ಎಂ. ಲಿಮಿಟೆಡ್, ಸಮೀರವಾಡಿ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ |
| 60 | 183 | ಶ್ರೀ ರಾಮ ಮೂರ್ತಿ ಟಿ., ಕ್ವಾರ್ಟರ್ಸ್ ನಂ. 222ಇ, ಸೆಕ್ಟರ್–9, ಉಕ್ಕುನಗರಂ ಸ್ಟೀಲ್ ಪ್ಲಾಂಟ್, ವಿಶಾಖಪಟ್ಟಣಂ–530 032 |
| 61 | 186 | ತುಟಿಕ ಪ್ರಸಾದ್ ರಾವ್, ಕಾಲೇಜು ಸ್ಟ್ರೀಟ್, ಕೊಂದುರು ಅಂಚೆ, ಶ್ರೀಕಾಕುಲಂ ಜಿಲ್ಲೆ. ಆಂಧ್ರ ಪ್ರದೇಶ – 532 168 |
| 62 | 191 | ವೀರಮಚ್ಚೆನಿ ಸತೀಶ್ ಬಾಬು, C/o. ವಿ. ಸತೀಶ್ ಬಾಬು, S/o. ವಿ. ಪಿಚ್ಚೇಶ್ವ ರಾವ್, ನಂ. 3–29–39/ಡಿ, ಕೃಷ್ಣ ನಗರ, 3ನೇ ಲೈನ್, ಗುಂಟೂರ್–522 006 |
| 63 | 195 | ವಿಜಯ ಕುಮಾರ್ ವರ್ಮ, C/o. ದಾಮೋದರ್ ಪ್ರಸಾದ್ ಚೌದರಿ, "ಓಂ ದಮ್ರು ಸಾಧನ್", ದರೋಗಪರ ಪಟೇಲ್ ಪಾರ, ರಾಯಗರ್–496 001 |
| 64 | 196 | ವೆನಿಗಲ ಮಾರುತಿ ರಾವ್, ಗಣಪತಿ ಶುಗರ್ ಇಂಡ. ಲಿ, ಪೋಸ್ಟ್ ಬಾಕ್ಸ್ ನಂ. 29, ಕುಲ್ಬಗುರ್/ಫಾಸಲವಾಡಿ ವಿಲೇಜ್, ಸಂಗರೆಡ್ಡಿ, ಮೇಡಕ್ ಜಿಲ್ಲೆ, ಆಂಧ್ರ ಪ್ರದೇಶ–502 294 |
| 65 | 201 | ವೆಂಕಟೇಶ್ವರ್ ರಾವ್ ಭೀಮದ, C/o. ಲಸ್ಕರ್ ರಾಮಯ್ಯ, 14ನೇ ವಾರ್ಡ್, ಪೋಲಿಸ್ ಲೈನ್ ಹಿಂದೆ, ಸದಾಶಿವನಗರ, ಸಿರುಗುಪ್ಪ (ತಾಲ್ಲೂಕು ಮತ್ತು ಅಂಚೆ)–583 121, ಬಳ್ಳಾರಿ. |
| 66 | 202 | ವೇಣುಗೋಪಾಲ ರಾವ್ ಎಂ. ವಿ., ಪಿ.ಬಿ. ನಂ. 9, ಜಿಂದಾಲ್ ಥರ್ಮಲ್ ಪವರ್ ಕಂಪನಿ ಲಿಮಿಟೆಡ್, ತೋರಣಗಲ್ಲು (ಅಂಚೆ), ಬಳ್ಳಾರಿ ಜಿಲ್ಲೆ. |
| 67 | 203 | ವಿಜಯಕುಮಾರ್ ಬಸಪ್ಪ ಎಂ., ಸಿಲಿಕಾನ್ ಇಂಟರ್‌ನೆಟ್, ದೇವಿ ಕಾಲೋನಿ, ಗುರುನಾಕ್ ಮುಖ್ಯ ಗೇಟ್ ಎದುರು, ಬೀದರ್–585 401 |
| 68 | 205 | ವಿಕ್ರಂ ಕಾಮತ್ ಡಿ., S/o. ದಶರಥ, ನಂ. 32/41, ಎ. ರಾಮಣ್ಣ ಸ್ಟ್ರೀಟ್, ಶ್ರೀರಂಗಪಟ್ಟಣ – 571 438, ಮಂಡ್ಯ. |
| 69 | 206 | ವಿನಾಯಕ್ ಹೆಗ್ಗಡೆ, ಇ–1/353, ಆಫೀಸರ್ಸ್ ಕ್ವಾರ್ಟರ್ಸ್, ಪೇಪರ್ ಟೌನ್ (ಅಂಚೆ), ಭದ್ರಾವತಿ – 577 302 |
| 70 | 207 | ವಿಶ್ವೇಶ್ವರಯ್ಯ ಎಸ್. ಹಿರೇಮಠ, ರಿದ್ದಿ ಸಿದ್ದಿ ಗ್ಲೂಕೊ ಬಾಯ್ಲ್ಸ್‌ಲಿ, ಪಿ.ಬಿ. ನಂ. 09, ಫಾಲ್ಸ್ ರಸ್ತೆ, ಗೋಕಾಕ್–591 307, ಬೆಳಗಾಂ ಜಿಲ್ಲೆ. |
| 71 | 209 | ಎಡವಳ್ಳಿ ನಾಗೇಂದ್ರ ರೆಡ್ಡಿ, C/o. ಹೆಚ್. ಸೀತಾರಾಮ ರೆಡ್ಡಿ, ಎಲ್. ಜಿ–27, ಕೆಹೆಚ್‌ಬಿ ಕಾಲೋನಿ, ಬೆಳಗೊಲ ಕ್ರಾಸ್ ಹತ್ತಿರ, ಬಳ್ಳಾರಿ ಜಿಲ್ಲೆ–583 102. |
| 72 | 210 | ಜಮೀರ್ ಖಾನ್ ಶೇಕ್, ಮೆ॥ ಗಣಪತಿ ಶುಗರ್ ಇಂಡಸ್ಟ್ರೀಸ್ ಲಿಮಿಟೆಡ್, ಫಸಲವಾಡಿ (ವಿಲೇಜ್), ಸಂಗರೆಡ್ಡಿ, ಮೇಡಕ್ ಜಿಲ್ಲೆ –502 294, ಆಂಧ್ರ ಪ್ರದೇಶ |

ಕಾರ್ಯದರ್ಶಿ,

ಪಿ.ಆರ್. 640 ಬಾಯ್ಲರುಗಳ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು.

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ**

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು ಹಾಗೂ ಅಧ್ಯಕ್ಷರು ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು ರವರ ಕಛೇರಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂ:ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಸಿಆರ್–01/05–06, ದಿನಾಂಕ: 6ನೇ ಏಪ್ರಿಲ್ 2005**

**ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಯ ಅಧಿಸೂಚನೆ**

ದಿನಾಂಕ 30-3-2005 ರಂದು ಮಂಡಳಿ ಸಭೆ ಸೇರಿ ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಯನ್ನು 2005ನೇ ಸಾಲಿನ ಜೂನ್ ತಿಂಗಳಿನಲ್ಲಿ ನಡೆಸಲು ನಿರ್ಧರಿಸಲಾಗಿದೆ.

ಆಸಕ್ತ ಅಭ್ಯರ್ಥಿಗಳು, ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಹತ್ತು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಸ್ವವಿಳಾಸವುಳ್ಳ ಲಕೋಟೆಯೊಂದಿಗೆ ಕಾರ್ಯದರ್ಶಿ, ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29, ಇವರಿಗೆ ಮನವಿ ಸಲ್ಲಿಸಿ ಪಡೆದುಕೊಳ್ಳಬಹುದು. ಪರೀಕ್ಷೆಗಾಗಿ ಕುಳಿತು ಕೊಳ್ಳ ಬಯಸುವ ಅಭ್ಯರ್ಥಿಗಳು ಈ ಕೆಳಕಂಡಂತೆ ಕನಿಷ್ಠ ಅರ್ಹತೆ ಮತ್ತು ಅನುಭವ ಹೊಂದಿರಬೇಕಾಗಿರುತ್ತದೆ.

**ವಯೋಮಿತಿ, ವಿದ್ಯಾರ್ಹತೆ ಮತ್ತು ಅನುಭವ**

ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಗೆ ಕುಳಿತುಕೊಳ್ಳ ಬಯಸುವ ಅಭ್ಯರ್ಥಿಯ ವಯಸ್ಸು 23 ವರ್ಷಕ್ಕಿಂತ ಕಡಿಮೆ ಇರಬಾರದು. ಹಾಗು

೧. ಮಾನ್ಯತೆ ಪಡೆದ ಬಾಯ್ಲರಗಳ ಮತ್ತು ಆ್ಯಕ್ಸಸರಿಲಿಸ್‌ಗಳನ್ನು ತಯಾರಿಸುವ ಅಥವಾ ದುರಸ್ತಿ ಮಾಡುವ ಕಾರ್ಯಗಾರದಲ್ಲಿ ಪೂರ್ಣ ಅವಧಿಯ ಅಪರೆಂಟಿಶಿಪ್ ಇಂಜಿನಿಯರ್ ಕೋರ್ಸ್ ಅನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

**ಅಥವಾ**

ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಇಂಡಿಯಾ) ಇವರಿಂದ ಮಾನ್ಯತೆ ಪಡೆದ ವಿದ್ಯಾಸಂಸ್ಥೆಯಿಂದ ಮೆಕ್ಯಾನಿಕಲ್ ಅಥವಾ ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ಡಿಗ್ರಿ ಅಥವಾ ಡಿಪ್ಲೋಮಾ ವಿದ್ಯಾರ್ಹತೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

೨. ಎರಡು ಬಾಯ್ಲರ್‌ಗಳಿಗಿಂತ ಕಡಿಮೆ ಇರದ ಬಾಯ್ಲರುಗಳ ಸಮೂಹದಲ್ಲಿ ಮತ್ತು ಪ್ರತಿಯೊಂದು ಬಾಯ್ಲರಿನ ಹೀಟಿಂಗ್ ಸರ್ಫೇಸ್ ಒಂದು ಸಾವಿರ ಚದರ ಅಡಿಗಿಂತ ಕಡಿಮೆ ಇರದ ಬಾಯ್ಲರುಗಳಲ್ಲಿ ಕನಿಷ್ಠ ಎರಡು ವರ್ಷದ ಅವಧಿಗೆ ಅವುಗಳ ನಿರ್ವಹಣೆ ಮತ್ತು ಚಾಲನೆಯಲ್ಲಿ ಇಂಜಿನಿಯರ್ ಅಥವಾ ಸಹಾಯಕ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ ಅನುಭವ ಹೊಂದಿರಬೇಕು.

ಪರೀಕ್ಷೆಗೆ ಕುಳಿತುಕೊಳ್ಳುವ ಅಭ್ಯರ್ಥಿಗಳು ಪರೀಕ್ಷಾ ಶುಲ್ಕ ರೂ. 150-00 ನ್ನು ಡಿಡಿ ಅಥವಾ ಪೇ ಆರ್ಡರ್ ಅಥವಾ ಚಲನ್ ಮುಖಾಂತರ ಸಂದಾಯ ಮಾಡಬಹುದು, ಡಿಡಿ ಅಥವಾ ಪೇ ಆರ್ಡರ್ ಅನ್ನು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಕರ್ನಾಟಕದಲ್ಲಿ, ಬೆಂಗಳೂರು ಅವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆಯತಕ್ಕದ್ದು. ಚಲನ್ ಮುಖಾಂತರ ಪರೀಕ್ಷಾ ಶುಲ್ಕವನ್ನು ಸಂದಾಯ ಮಾಡಿದಲ್ಲಿ "0230 ಕಾರ್ಮಿಕ ಮತ್ತು ಉದ್ಯೋಗ 103 ಸ್ಟೀಮ್ ಬಾಯ್ಲರುಗಳ ಪರಿವೀಕ್ಷಣಾ ಶುಲ್ಕ" ಲೆಕ್ಕ ಶೀರ್ಷಿಕೆಯಲ್ಲಿ ಜಮ ಮಾಡತಕ್ಕದ್ದು. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದು.

ಭರ್ತಿ ಮಾಡಿದ ಅರ್ಜಿಗಳನ್ನು, ಈ ಕಛೇರಿಯಲ್ಲಿ ಸ್ವೀಕರಿಸುವ ಕೊನೆಯ ದಿನಾಂಕ 20-5-2005 ಇರುವುದು. ಅನಂತರ ತಲುಪಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಯದರ್ಶಿ

ಬಾಯ್ಲರುಗಳ ಆಪರೇಷನ್ ಇಂಜಿನಿಯರ್ ಪರೀಕ್ಷಾ ಮಂಡಳಿ, ಬೆಂಗಳೂರು

**DEPARTMENT OF FACTORIES & BOILERS**

**Office of the Director of Factories and Boilers and Chairman, Boiler Operation Engineer Examination Board, Karmika Bhavan, 2nd Floor, Near Dairy Circle, ITI Compound, Bannerghatta Road, Bangalore**

**No. DFB/BLR/BOE/MISC/CR- 01/05-06, Date: 6th April 2005**

**NOTIFICATION REGARDING BOILER OPERATION ENGINEERS EXAMINATION**

The Boiler Operation Engineer Examination Board in its meeting held on 30-3-2005 decided to conduct next Examination in the month of June 2005. The candidates who desired to appear for the said examination, may obtain the application from this office during office hours or the same may be obtained from the Secretary, Boiler Operation Engineers Examination Board, Karmika Bhavan, 2nd Floor, Near Dairy Circle, ITI Compound, Bannerghatta road, Bangalore-560 029 by sending requisition with self addressed Rs.10/= postal stamp affixed envelope. The age and training required for a candidate to appear for examination is as follows.

**Age, Qualification and Experience**

A candidate who desires to appear for Boiler Operation Engineers Examination shall not be less than 23 years of age and shall not be admitted to the examination unless he proves to the satisfaction of the Chairman that he has successfully completed.

a) A full time apprentice engineer's course in a recognised workshop engaged in making or repairing of boilers and accessories.

Or

A degree or diploma in mechanical or electrical engineering recognised by the Institution of Engineers (India).

And

b) Served not less than two years as Engineer or Assistant Engineer in the running and maintenance of a battery of boilers not less than two in number and each of not less than One thousand square feet heating surface.

The candidate who desire to appear for examination shall pay an examination fees of Rs.150/= either through D.D or Pay order or treasury challan. The D.D or Pay order shall be drawn in favour of Director of Factories and Boilers in Karnataka, Bangalore, from any Nationalized Bank. If the fees is paid through treasury challan the same shall be credited to "0230 Labour and Employment, 103 Fee for Inspection of steam boilers" Head of account. Further detail if required may be obtained from this office.

The last date for receipt of duly filled application form is 20/5/2005.

Secretary,
Boiler Operation Engineers Examination board, and
Joint Director of Boilers, Bangalore

P.R. 641

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು - 560 018**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಸ್:6594:2004-05, ದಿನಾಂಕ: 18ನೇ ಫೆಬ್ರವರಿ 2005**

**ವಾದಿ**

ಕಾರ್ಯದರ್ಶಿ,
ಸಪ್ತರ್ಷಿ ಕ್ರೆಡಿಟ್ ಕೋ-ಅಪರೇಟಿವ್ ಸೊಸೈಟಿ ಲಿ.,
ನಂ.55:15, ಮಲ್ಲಿಕಾರ್ಜುನ ದೇವಸ್ಥಾನದ ರಸ್ತೆ,
ಡಾ: ಡಿ ವಿ ಜಿ ರಸ್ತೆ, ಕ್ರಾಸ್, ಬೆಂಗಳೂರು-04.

**ಪ್ರತಿವಾದಿಗಳು**

1. ದಯಾನಿ ನಾಗರಾಜ್, ಕೋಂ ಲೇಟ್ ನಾಗರಾಜ್,
ನಂ.25, 6ನೇ ಕ್ರಾಸ್, 7ನೇ ಮುಖ್ಯರಸ್ತೆ,
ಬಿ.ಟಿ.ಎಂ. 2ನೇ ಹಂತ, ಎನ್.ಎಸ್. ಪಾಳ್ಯ,
ಬೆಂಗಳೂರು-76.
2. ಬಿ.ಪಿ. ನಾಗರಾಜ್,
ನಂ.25, 6ನೇ ಕ್ರಾಸ್, 7ನೇ ಮುಖ್ಯರಸ್ತೆ,
ಎನ್.ಎಸ್. ಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76.
3. ಎಂ.ವಿ. ರವೀಂದ್ರ,
ಬಿನ್ ಎಂ.ಆರ್. ವೆಂಕಟದಾಸಪ್ಪ, ನಂ.ಟಿ.573,
21ನೇ ಮೈನ್ 4ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು-41.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರ ಮತ್ತು ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.58,548 ಗಳನ್ನು ಶೇ. 17 ರಂತೆ ಬಡ್ಡಿ ಮತ್ತು ಶೇ. 2 ರಂತೆ ಸುಸ್ತಿ ಬಡ್ಡಿಯೊಂದಿಗೆ ಸಂಪೂರ್ಣ ತೀರುವಳಿಯಾಗುವವರೆಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ:ಎಂಡಿ:6594:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 2ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 2ನೇ ಪ್ರತಿವಾದಿಯು ಮೃತರಾಗಿದ್ದು, ಅವರ ವಾರಸುದಾರರಾದ 1ನೇ ಪ್ರತಿವಾದಿಯು 2ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರ ಅರ್ಜಿಯಲ್ಲಿ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 2ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.58,548 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ:7-3-2005 ರ ಒಳಗಾಗಿ ಅಧಿಕೃತ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರ ಬನ್ನೇರುಘಟ್ಟ ರಸ್ತೆಯ ಎಸ್.ಎಸ್. ಪಾಳ್ಯದ 7ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆಯಲ್ಲಿರುವ 30 x 40 ಅಡಿ ಅಳತೆಯ ನಿವೇಶನ ಸಂಖ್ಯೆ 25 ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಖಾಸಗಿ ಸ್ವತ್ತು
ಪಶ್ಚಿಮಕ್ಕೆ : ಖಾಲಿ ನಿವೇಶನ
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ಖಾಸಗಿ ಸ್ವತ್ತು

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 18-2-2005 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 643 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು - 560 018**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಐಎಸ್:6593:2004-05, ದಿನಾಂಕ: 18ನೇ ಫೆಬ್ರವರಿ 2005**

**ವಾದಿ**

ಸಪ್ತರ್ಷಿ ಕ್ರೆಡಿಟ್ ಕೋ-ಅಪರೇಟಿವ್ ಸೊಸೈಟಿ ಲಿ.,
ನಂ.54:16 ಮತ್ತು 55:15, ಮಲ್ಲಿಕಾರ್ಜುನ ದೇವಸ್ಥಾನದ ರಸ್ತೆ,
ಡಾ: ಡಿ.ವಿ.ಜಿ. ರಸ್ತೆ, ಕ್ರಾಸ್, ಬಸವನಗುಡಿ, ಬೆಂಗಳೂರು-04.

**ಪ್ರತಿವಾದಿಗಳು**

1. ಶ್ರೀ ಬಿ.ಪಿ. ನಾಗರಾಜ್ (ಲೇಟ್)
ಇವರ ವಾರಸುದಾರರು:
1) (ಎ) ಶ್ರೀಮತಿ ದಯಿನಿ ನಾಗರಾಜ್
ಕೋಂ ಲೇಟ್ ಬಿ.ಪಿ. ನಾಗರಾಜ್ ನಂ.25, 6ನೇ ಕ್ರಾಸ್, 7ನೇ ಮುಖ್ಯರಸ್ತೆ, ಬಿ.ಟಿ.ಎಂ. 2ನೇ ಹಂತ, ಎಸ್.ಎಸ್. ಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76.
2) ಎಂ.ವಿ. ರವೀಂದ್ರ,
ನಂ.ಟಿ.573, 21ನೇ ಮೈನ್, 4ನೇ 'ಟಿ' ಬ್ಲಾಕ್,
ಜಯನಗರ, ಬೆಂಗಳೂರು-41.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.55,664-00 ಗಳನ್ನು ಶೇ. 17 ರಂತೆ ಬಡ್ಡಿ ಮತ್ತು ಶೇ. 2 ರಂತೆ ಸುಸ್ತಿ ಬಡ್ಡಿಯೊಂದಿಗೆ ಸಂಪೂರ್ಣ ತೀರುವಳಿಯಾಗುವವರೆಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ:ಎಂಡಿ:6594:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯವರು ಮೃತರಾಗಿದ್ದು, ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಅವರ ವಾರಸುದಾರರಾದ ಪ್ರತಿವಾದಿ 1(ಎ) ಇವರು ಮಾರಾಟ ಮಾಡಲು : ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ

ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.55,664-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ:7-3-2005 ರ ಒಳಗಾಗಿ ಅಧಿಕೃತ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರ ಬನ್ನೇರುಘಟ್ಟ ರಸ್ತೆಯ ಎನ್.ಎಸ್. ಪಾಳ್ಯದ 7ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆಯಲ್ಲಿರುವ 30 x 40 ಅಡಿ ಅಳತೆಯ ನಿವೇಶನ ಸಂಖ್ಯೆ 25 ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಖಾಸಗಿ ಸ್ವತ್ತು
ಪಶ್ಚಿಮಕ್ಕೆ : ಖಾಲಿ ನಿವೇಶನ
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ಖಾಸಗಿ ಸ್ವತ್ತು

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 18-2-2005 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 644 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ,**

**ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಇವರ ಕಾರ್ಯಾಲಯ**

**ವಿಷಯ:** ಗಾಯಿತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಈ ಸಂಘವನ್ನು ಸಮಾಪನೆ ಮಾಡುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಇವರ ಪತ್ರ ಸಂಖ್ಯೆ:ಸನಿಬೆ 044/ಸಮಾಪನೆ/18/ 2004-05 ದಿ: 7.1.2005.
2. ಸಂಘದ ಆಡಳಿತಾಧಿಕಾರಿ ಪತ್ರ ಸಂಖ್ಯೆ:ಅಧಿ/ಸಸಂಸನಿ-1/ಅ/2004-05 ದಿನಾಂಕ:31.5.2004.

ಗಾಯಿತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಸವೇಶ್ವರ ನಗರ, ಬೆಂಗಳೂರು-79 ಈ ಸಂಘವು ನೋಂದಣಿ ಸಂಖ್ಯೆ:ಡಿವೈಬಿ/95 ದಿನಾಂಕ:23.5.1969ರಲ್ಲಿ ನೋಂದಣಿಯಾಗಿರುತ್ತದೆ. ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡುತ್ತಾ ಈ ಸಂಘವು 2003-04ರಿಂದ 2007-2008ನೇ ಸಾಲಿನ ಆಡಳಿತ ಮಂಡಳಿ ಚುನಾವಣೆಯನ್ನು ನಡೆಸದೆ ಇದ್ದ ಪ್ರಯುಕ್ತ ಈ ಸಂಘಕ್ಕೆ ತಮ್ಮ ಆದೇಶ ಸಂಖ್ಯೆ:ಸನಿ-14/ಜಿಬಿಎಂ/ಎಆರ್‌ಬಿ/105/2002-03 ದಿನಾಂಕ:28.12.2002ರಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 28(ಎ)(5)ರ ಪ್ರಕಾರ ಆಡಳಿತಾಧಿಕಾರಿಯಾಗಿ ತಮ್ಮ ಕಛೇರಿ ಅಧೀಕ್ಷಕರನ್ನು ನೇಮಕ ಮಾಡಿದ್ದಾಗಿ, ಸದರಿ ಆಡಳಿತಾಧಿಕಾರಿ ಈ ಸಂಘದ ಪ್ರಭಾರವನ್ನು ವಹಿಸಿಕೊಳ್ಳಲು ಸಾಕಷ್ಟು ಪ್ರಯತ್ನಪಟ್ಟರೂ ಈ ಸಂಘವು ನೋಂದಾಯಿತ ವಿಳಾಸದಲ್ಲಾಗಲೀ ಅಥವಾ ಬೇರೆಡೆಯಲ್ಲಾಗಲೀ ಕಾರ್ಯನಿರ್ವಹಿಸದಿದ್ದ ಕಾರಣ ಪ್ರಭಾರವನ್ನು ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು, ಲೆಕ್ಕಪರಿಶೋಧನಾ ಇಲಾಖೆಯಲ್ಲಿ ಪರಿಶೀಲಿಸಲಾಗಿ ಈ ಸಂಘದ ಲೆಕ್ಕ ಪರಿಶೋಧನೆ ಆಗಿರುವ ಬಗ್ಗೆ ಯಾವುದೇ ಮಾಹಿತಿ ದೊರಕಿರುವುದಿಲ್ಲವೆಂದು, ಇದರ ಅಸ್ತಿತ್ವ ದೊರಕದೆ ಇದ್ದ ಕಾರಣ ಈ ಸಂಘವನ್ನು ಸಮಾಪನೆ ಮಾಡುವುದು ಸೂಕ್ತವೆಂದು ಉಲ್ಲೇಖ (2)ರಲ್ಲಿ ಅಭಿಪ್ರಾಯಪಟ್ಟು ವರದಿ ನೀಡಿರುವುದಾಗಿ ಉಲ್ಲೇಖ (1)ರ ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮುಂದುವರಿದು, ತಮ್ಮ ಪತ್ರದಲ್ಲಿ ಈ ಸಂಘವು 2003-04ರ ಸಾಲಿನ ಸಹಕಾರ ಸಂಘಗಳ ಪಟ್ಟಿಯನ್ನು ಪರಿಶೀಲಿಸಲಾಗಿ ಸ್ಥಗಿತಗೊಂಡ ಪಟ್ಟಿಯಲ್ಲಿದ್ದು, ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಉಲ್ಲೇಖ (2)ರಲ್ಲೂ ಸಂಘದ ಆಡಳಿತಾಧಿಕಾರಿಯವರು ಸಹ ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ. ಅಲ್ಲದೆ ಈ ಸಂಘದ ವಿಳಾಸಕ್ಕೆ ಹಲವಾರು ಬಾರಿ ಭೇಟಿ ನೀಡಲಾಗಿ ಬಾಗಿಲು ಮುಚ್ಚಿದ್ದು, ಈ ಸಂಘದ ಅಧ್ಯಕ್ಷರು, ನಿರ್ದೇಶಕರುಗಳು ಲಭ್ಯವಿಲ್ಲದೆ ಇದ್ದು ಇವರುಗಳ ವಿಳಾಸಗಳೂ ಸಹ ಲಭ್ಯವಿಲ್ಲವೆಂದು ತಿಳಿಸಿರುತ್ತಾರೆ.

ಮೇಲಿನ ಶಿಫಾರಸ್ಸಿನಂತೆ ಈ ಸಂಘವು ಅಸ್ತಿತ್ವವನ್ನು ಕಳೆದುಕೊಂಡು ನಿಷ್ಕ್ರಿಯಗೊಂಡಿರುವುದಾಗಿ ತಿಳಿದುಬಂದಿರುವುದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72ರಡಿಯಲ್ಲಿ ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ. ಈ ಸಂಘದ ಆಡಳಿತ ಮಂಡಳಿ ಸದಸ್ಯರ ಮತ್ತು ಪದಾಧಿಕಾರಿಗಳ ವಿಳಾಸಗಳು ಲಭ್ಯವಿಲ್ಲದೇ ಇರುವ ಕಾರಣ ಕಲಂ 72(1)ರಡಿ ನೋಟೀಸ್ ಜಾರಿಗೊಳಿಸಿ ಅಭಿಪ್ರಾಯ ಪಡೆಯಲು ಸಾಧ್ಯವಾಗುತ್ತಿಲ್ಲ.

ಈ ಸಂಘವು ಸರ್ಕಾರದಿಂದಾಗಲೀ, ಇನ್ನಾವುದೇ ಬ್ಯಾಂಕುಗಳಿಂದಾಗಲೀ ಆರ್ಥಿಕ ಸೌಲಭ್ಯವನ್ನು ಪಡೆದುಕೊಂಡಿರುವುದು ಕಂಡುಬಂದಿಲ್ಲ.

ಮೇಲೆ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸಹಕಾರ ಸಂಘಗಳ ಕಾಯಿದೆ 72(1)ರನ್ವಯ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಕ್ಕೆ ಬಂದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿಆರ್‌ಬಿ-1/ಸಮಾಪನೆ/38/2004-05, ದಿನಾಂಕ: 31ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(1)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ:21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗಾಯಿತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಸವೇಶ್ವರ ನಗರ, ಬೆಂಗಳೂರು-79 ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73ರ ರೀತ್ಯಾ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯಿದೆ ಕಲಂ 74ರ ರೀತ್ಯಾ ಕ್ರಮ ಕೈಗೊಂಡು ವರದಿ ಸಲ್ಲಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ:31.3.2005 ರಂದು ಹೊರಡಿಸಲಾಗಿದೆ.

ಪಿ.ಆರ್. 645 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ**

**ಸಂಖ್ಯೆ: ಎ2 : ಕ್ರೈಂ ನಂ.ಅಮೊಸಂ:156/96:ಸಿಆರ್-21/03-04, ದಿನಾಂಕ: 7ನೇ ಏಪ್ರಿಲ್ 2005**

ದಾವಣಗೆರೆ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀ ಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ದಾವಣಗೆರೆ ಅರಣ್ಯ ವಿಭಾಗದ ಸಿಬ್ಬಂದಿ ವರ್ಗದವರು ಹಾಗೂ ಪೊಲೀಸ್ ಇಲಾಖೆಯವರು ಸರ್ಕಾರದ ಪರ ಅಮಾನತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ವಿವರ | ಪೊಲೀಸ್ ಮೊಕದ್ದಮೆ ಸಂಖ್ಯೆ | ವಾಹನದ ಸಂಖ್ಯೆ | ಎಂಜಿನ್ ಸಂಖ್ಯೆ | ಶ್ರೀಗಂಧದ ಪ್ರಮಾಣ |
|---|---|---|---|---|---|
| 1 | ಅಂಬಾಸಿಡರ್ ಕಾರು | 156/96 | ಸಿಎನ್‌ಎಂ-1509 | OER 05579 | 268.5 Kgs |

ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯ ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ, ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಕೆ.ಬಿ. ಗುರುಬಸವರಾಜ್**

ಪಿ.ಆರ್. 646 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಎಸ್‌ಆರ್-68:2005, ದಿನಾಂಕ: 13ನೇ ಏಪ್ರಿಲ್ 2005**

**ಅರ್ಜಿದಾರರು**

1. ಶ್ರೀಮತಿ ಖುರ್ಷಿದ ಗಂಡ ಸೈಯದ್ ಅಫೀಜ,
2. ಸೈಯ್ಯದ ವಾಸಿಮಪಾಶ, (3) ಸೈಯ್ಯದ ಗೌಸ,
4. ಸೈಯ್ಯದ ಫೀರೋಜ, (5) ಸೈಯ್ಯದ ರಿಜವಾನಪಾಶ,
6. ಸೈಯ್ಯದ ಸಲಮಾನಪಾಶ, (7) ಆಫ್ರಿನ್ ತಾಜ,
8. ಸೈಯ್ಯದ ಮುಬಾರಕಪಾಶ
9. ಶ್ರೀಮತಿ ಸಫಿಯಾಬಿ ಗಂಡ ಸೈಯ್ಯದ ಜಾಫರ್ ವಾಸ-ಕೊಣ್ಣೂರ, ತಾಲ್ಲೂಕ:ಜಿಲ್ಲೆ-ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು**

1. ಮೊಹ್ಮದ ಉಬೆದ್ದೂಲ ತಂದೆ ಅಬ್ದುಲ ರಹೀಮ ವಾಸ-ಮನೆ ನಂ.3, ಮೊದಲನೆ ಮಹಡಿ, 6ನೇ ಬ್ಲಾಕ್, 'ಬಿ' ಕ್ರಾಸ್ ಕಾಳಿ ಟೆಂಪಲ್ ಸ್ಟ್ರೀಟ್, ಸುಬೆದಾರಪಾಳ್ಯ, ಬೆಂಗಳೂರು.
2. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ ಖುರ್ಷಿದ್ ಗಂಡ ಸೈಯ್ಯದ ಆಫೀಜ ಹಾಗೂ ಇತರೆ 8 ಜನ ಇವರುಗಳಾದ ತಾವು ಮೃತ ಸೈಯ್ಯದ ಅಫೀಜ ತಂದೆ ಸೈಯ್ಯದ ಜಾಫರ್ ಇವರ ಹೆಂಡತಿ ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸೈಯ್ಯದ ಅಫೀಜ ಇವರು ಒಂದನೇ ಪ್ರತಿವಾದಿಗಳಾದ ಮೊಹ್ಮದ ಉಬೆದ್ದೂಲ ತಂದೆ ಅಬ್ದೂಲ ರಹೀಮ ಇವರ ಟ್ರಕ್ ಸಂಖ್ಯೆ: ಕೆಎ-05:8650 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರ**

ಪಿ.ಆರ್. 647 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪುರ ಜಿಲ್ಲೆ ಬಿಜಾಪುರ.